ಶ್ರೀಃ

ಶ್ರೀಕಲ್ಕಿ ಸಿಂಹಭಗವದ್ವಿರಚಿತವಾದ

# ಗೀತಾತಾತ್ಪರ್ಯ ಸಾರಾಮೃತ

---

ಸರ್ವಚೇತನೋಜ್ಜೀವನಕರವಾದ
ಗೀತಾಚಾರ್ಯನ ಶ್ರೀ ಭಗವನ್ಮತದ ಸಾರಾಂಶ



1931
ಬೆಂಗಳೂರು (ಕಲ್ಯಾಣಪುರೀ) ಇಂಡಿಯನ್ ಮುದ್ರಾಶಾಲೆಯಲ್ಲಿ
ಮುದ್ರಿತವಾದುದು



Price As. 8] [ಕ್ರಯ ೮ ಆಣೆ

ಶ್ರೀಃ

ಶ್ರೀಕಲ್ಕಿ ಸಿಂಹಭಗವದ್ಭಿರಚಿತವಾದ

# ಗೀತಾತಾತ್ಪರ್ಯ ಸಾರಾಮೃತ

---

ಸರ್ವಚೇತನೋಜ್ಜೀವನಕರವಾದ

**ಗೀತಾಚಾರ್ಯನ ಶ್ರೀ ಭಗವನ್ಮತದ ಸಾರಾಂಶ**



1931

ಬೆಂಗಳೂರು (ಕಲ್ಯಾಣಪುರೀ) ಇಂಡಿಯನ್ ಮುದ್ರಾಶಾಲೆಯಲ್ಲಿ
ಮುದ್ರಿತವಾದುದು



Price As. 8 ] [ ಕ್ರಯ ೮ ಆಣೆ

॥ ಶ್ರೀಃ ॥

## ಗೀತಾತಾತ್ಪರ್ಯ ಸಾರಾಮೃತದ

# ವಿ ಷ ಯಾ ನು ಕ್ರ ಮ ಣೀ

---

ಶ್ರೀಃ

ಶ್ರೀಮತೇ ಕಲ್ಕಿಸಿಂಹಾಯ ಭಗವತೇ ನಮಃ

## ಪೀಠಿಕಾ

ಶ್ರಿಯಃಪತಿಯಾದ ಭಗವಂತನು ಸಕಲ ಚೇತನೋಜ್ಜೀವನಕ್ಕಾಗಿ ಪರವ್ಯೂಹವಿಭವಾನ್ತರ್ಯಾಮ್ಯರ್ಚಾವತಾರಾದಿರೂಪವಾದ ಅನೇಕಾವತಾರಗಳನ್ನು ಮಾಡಿ ಸಂಸಾರಾನಲಸನ್ತಪ್ತರಾದ ಚೇತನರಿಗೆ ಸಾಕ್ಷಾತ್ತಾಗಿ ತಾನೇ ಕೆಲವು ವೇಳೆಗಳಲ್ಲಿ ಉಪದೇಶಮಾಡಿ ಆಚಾರ್ಯ ಕೃತ್ಯವನ್ನೂ, ಹಿತಪರನಾಗಿಯೂ ಪ್ರಿಯಪರನಾಗಿಯೂ ಇವರನ್ನು ರಕ್ಷಿಸುತ್ತ ಮಾತಾಪಿತೃಕೃತ್ಯವನ್ನೂ ತಾನೇ ಮಾಡುತ್ತ, ಕೆಲವು ವೇಳೆಗಳಲ್ಲಿ ತನ್ನ ಭಕ್ತೋತ್ತಮರಾದ ದಿವ್ಯಸೂರಿಗಳನ್ನು ಈ ಭೂಲೋಕದಲ್ಲಿ ಅವತರಿಸುವಂತೆ ಆಜ್ಞಾಪಿಸಿ ಅವರ ಮೂಲಕ ಅನೇಕ ಪ್ರಬನ್ಧಗಳನ್ನು ಪ್ರಕಾಶಪಡಿಸಿ ಶಿಷ್ಯಾಚಾರ್ಯಕ್ರಮವನ್ನು ಏರ್ಪಡಿಸಿ ಉಪದೇಶಪರಂಪರೆಗಳಿಂದ ಚೇತನರನ್ನು ವಶೀಕರಿಸುತ್ತಿದಾನೆಂದು ಪ್ರಮಾಣಸಿದ್ಧವಾಗಿದೆಯಷ್ಟೆ. ಹೀಗೆ ಸಾಕ್ಷಾತ್ತಾಗಿ ತಾನೇ ಆಚಾರ್ಯಕೃತ್ಯವನ್ನು ನಿರ್ವಹಿಸಿದ ಅವತಾರಗಳಲ್ಲಿ ಶ್ರೀ ಕೃಷ್ಣಾವತಾರವು ದಶಾವತಾರಗಳಲ್ಲಿ ಅತ್ಯುತ್ಕೃಷ್ಟವಾದುದೆಂದು ಆಸ್ತಿಕರೆಲ್ಲರೂ ಅಂಗೀಕರಿಸಿರುತ್ತಾರೆ. ಶ್ರೀರಾಮಾವತಾರಕ್ಕೆ ಎಷ್ಟು ಪ್ರಾಶಸ್ತ್ಯವಿದ್ದರೂ ಗೀತಾಚಾರ್ಯತ್ವ ವೈಭವವು ಶ್ರೀಕೃಷ್ಣಾವತಾರದಲ್ಲಿಯೇ ಪ್ರಕಾಶಿಸಿದುದರಿಂದ, ಜಗನ್ಮೌಢ್ಯನಿವಾರಣಕ್ಕೆ ಶ್ರೀ ಭಗವಂತನ ಸಾಕ್ಷಾದುಪದೇಶವಾದ ಶ್ರೀ ಭಗವದ್ಗೀತೆಯೇ ಮುಖ್ಯ ಸಾಧನವಾಗಿದೆ. ಅರ್ಜುನವ್ಯಾಜದಿಂದ ಸಕಲಲೋಕೋಜ್ಜೀವನಕ್ಕಾಗಿ ಉಪದಿಷ್ಟವಾದ ಸರ್ವಶಾಸ್ತ್ರಾರ್ಥಸಾರವು ಈ ಗೀತಾಪ್ರಬನ್ಧದಲ್ಲಿ ಅದ್ಯಾಪಿ ಪ್ರಕಾಶಿಸುತ್ತಿದೆಯಷ್ಟೆ. ಈ ಪ್ರಬನ್ಧವೇ ಸರ್ವವೇದಾನ್ತಸಾರರೂಪವೆಂತಲೂ, ಇದರಲ್ಲಿ ಪ್ರತಿಪಾದಿತವಾದ ಪರಮಾರ್ಥವೇ

ಶ್ರೀ ಭಗವನ್ಮತವೆಂಬ ಸರ್ವಮತಸಮ್ಮತವಾದ ಮತವೆಂತಲೂ ಆಸ್ತಿಕ ರೆಲ್ಲರೂ ಅಂಗೀಕರಿಸಬೇಕಾಗಿದೆಯಷ್ಟೆ.

ಹೀಗಿದ್ದಾಗ್ಯೂ ಈ ಗೀತಾಪ್ರಬನ್ಧಕ್ಕೆ ದ್ವೈತಾದ್ವೈತ ವಿಶಿಷ್ಟಾದ್ವೈತಾದ್ಯನೇಕ ಮತಪ್ರವರ್ತಕರಾದ ಆಚಾರ್ಯರೆಲ್ಲರೂ ವ್ಯಾಖ್ಯಾನಗಳನ್ನು ರಚಿಸಿ ತಮ್ಮ ತಮ್ಮ ಪ್ರತಿಭಾವಿಶೇಷಗಳಿಂದ ಶ್ರೀಪರಮಾತ್ಮನಾದ ಭಗವನ್ತನ ಮತವು ಇಂತಹುದೆಂದು ತಾವು ತಾವು ಪ್ರತ್ಯೇಕವಾಗಿ ಭಿನ್ನ ಭಿನ್ನ ಮಾರ್ಗಗಳಿಂದ ವರ್ಣಿಸಿ ಇರುತ್ತಾರೆ. ಗೀತಾರೂಪವಾದ ಮೂಲಗ್ರನ್ಥವು ಒಂದೇ ಆಗಿ ಶ್ರೀ ಭಗವದುಪದೇಶರೂಪವಾದ ಪ್ರಬನ್ಧವೆಂದು ಅಂಗೀಕರಿಸಲ್ಪಟ್ಟಿದ್ದರೂ ಆಯಾ ವ್ಯಾಖ್ಯಾತೃಗಳು ತಮ್ಮ ತಮ್ಮ ಭಾಷ್ಯಗಳಲ್ಲಿ ಅರ್ಥವಿವರಣಮಾಡುವಾಗ ಬೇರೆ ಬೇರೆ ಮತಪ್ರಕ್ರಿಯೆಗಳನ್ನು ಪ್ರಚಾರಪಡಿಸಿ ಇರುವುದರಿಂದ ಶ್ರೀ ಭಗವನ್ಮತವು ಇದೇಯೆಂದು ನಿರ್ಣಯಿಸಲು ಅಸಾಧ್ಯವಾಗಿದೆ. ಗೀತಾಚಾರ್ಯನಾದ ಶ್ರೀಕೃಷ್ಣನ ಮತವು ಶಂಕರಾಚಾರ್ಯರಿಗೆ ಅಭಿಮತವಾದ ಅದ್ವೈತ ಸಿದ್ಧಾನ್ತವೇ, ರಾಮಾನುಜಾಚಾರ್ಯರಿಗೆ ಅಭಿಮತವಾದ ವಿಶಿಷ್ಟಾದ್ವೈತ ಸಿದ್ಧಾನ್ತವೇ, ಮಧ್ವಾಚಾರ್ಯರಿಗೆ ಅಭಿಮತವಾದ ದ್ವೈತಸಿದ್ಧಾನ್ತವೇ, ಅಥವಾ ಈ ಮತತ್ರಯದ ಶಾಖೋಪಶಾಖಾತ್ಮಕವಾದ ಇನ್ನೂ ಅನೇಕ ಮತಗಳ ಪ್ರವರ್ತಕರಾದ ಆಯಾಗ್ರನ್ಥಕರ್ತರ ಸಿದ್ಧಾನ್ತರೂಪವೇ—ಎಂದು ನಿರ್ಣಯಿಸಲು ಯಾವ ವೇದಾನ್ತ ವಿದ್ವಾಂಸರಿಗೂ ಈ ಕಾಲದಲ್ಲಿ ಶಕ್ತಿಯಿಲ್ಲದೆ ಇದೆ. ಅವರವರ ಮತಪ್ರಕ್ರಿಯೆಯೇ ಶ್ರೇಷ್ಠವೆಂತಲೂ ಅದೇ ಶ್ರೀಭಗವನ್ಮತ ಪ್ರಕಾಶಕವೆಂತಲೂ ಹೇಳುತ್ತ ಇತರ ಮತಗಳನ್ನೆಲ್ಲಾ ಖಂಡಿಸುವ ವಿದ್ವಾಂಸರೇ ಸರ್ವತ್ರ ದೃಶ್ಯರಾಗಿರುತ್ತಾರೆಯೇ ಹೊರತು, ಸರ್ವಮತ ಸಾಮರಸ್ಯವಂ ಮಾಡಿ ಶ್ರೀಭಗವನ್ಮತವು ಇದೇಯೆಂದು ನಿರ್ಣಯಿಸಲು ಶಕ್ತರಾದ ಮಹಾತ್ಮರು ಸುತರಾಂ ದುರ್ಲಭರಾಗಿರುತ್ತಾರೆ. ಈ ಪ್ರಪಂಚದ ಪ್ರಕೃತಸ್ಥಿತಿಯು ಈ ರೀತಿಯಲ್ಲಿರುವುದರಿಂದ ಶ್ರೀ ಭಗವನ್ತನೇ ಪುನಃ ಅವತರಿಸಿ ತನ್ನ ಗೀತೋಪದೇಶದ ಪ್ರಭಾವ

ವನ್ನು ತಾನೇ ಪುನಃ ಪ್ರಕಟಪಡಿಸಿ ತನ್ನ ಸಿದ್ಧಾಂತವಾದ ಶ್ರೀ ಭಗವನ್ಮತವು ಇಂತಹುದೇಯೆಂದು ನಿರ್ಣಯಿಸಬೇಕಾಗಿದೆಯಷ್ಟೆ.

ಆದುದರಿಂದಲೇ ಪ್ರಕೃತಕಾಲಾನುಗುಣವಾಗಿ ಕಲಿಧ್ವಂಸಕ್ಕಾಗಿ ಅವತರಿಸಿ ಇರುವ ಸಾಕ್ಷಾದ್ಭಗವದವತಾರರೂಪಿಯಾದ ಶ್ರೀ ಕಲ್ಕಿನಾರಸಿಂಹಸ್ವಾಮಿಯವರೇ ಈಗ ಸರ್ವಮತ ಸಾಮರಸ್ಯವಂ ಮಾಡಿ ತಮ್ಮ ಶ್ರೀ ಭಗವನ್ಮತವನ್ನು ಸಕಲಲೋಕೋಜ್ಜೀವನಕ್ಕಾಗಿ ನಿರ್ಣಯಿಸಿ ಪ್ರಕಟಪಡಿಸಲು ಸನ್ನದ್ಧರಾಗಿ, ತಮ್ಮ ಶ್ರೀ ಭಗವದ್ಗೀತಾ ಪ್ರಬನ್ಧದ ಮುಖ್ಯ ತಾತ್ಪರ್ಯವನ್ನು ತಾವೇ ವರ್ಣಿಸಲು ಉದ್ಯುಕ್ತರಾಗಿರುತ್ತಾರೆ. ಆದುದರಿಂದ ಸಕಲ ಮತಸ್ಥರೂ ಇವರಲ್ಲಿ ಪರಿಪೂರ್ಣ ವಿಶ್ವಾಸಶಾಲಿಗಳಾಗಿ ಇವರ ಉಪದೇಶಗಳನ್ನೇ ಅಂಗೀಕರಿಸಿ, ಪರಸ್ಪರ ವಿವಾದಗಳಂ ಬಿಟ್ಟು ಇವರ ಸಿದ್ಧಾನ್ತವಾದ ಶ್ರೀ ಭಗವನ್ಮತವನ್ನೇ ಅವಲಂಬಿಸಿ ಇವರ ಅನುಗ್ರಹಕ್ಕೆ ಪಾತ್ರರಾಗಿ ಅತ್ಯನ್ತ ಭಕ್ತಿನಿಷ್ಠರಾಗಿಯೂ ನಿತ್ಯಕೈಂಕರ್ಯನಿಷ್ಠರಾಗಿಯೂ ಕೃತಾರ್ಥರಾಗಬೇಕೆಂದು ನಾವು ಸವಿನಯವಾಗಿ ಪ್ರಾರ್ಥಿಸುತ್ತೇವೆ.

ಮಲ್ಲೇಶ್ವರ,<br>
ಬೆಂಗಳೂರು. } ಶ್ರೀ ಕಲ್ಕಿಸಿಂಹ ಭಗವದ್ಭಕ್ತರು.

॥ ಶ್ರೀಃ ॥

ಶ್ರೀಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ.

# ೬. ಗೀತಾತಾತ್ಪರ್ಯ ಸಾರಾಮೃತ

---

## (ಅವತಾರಿಕಾ)

ಶ್ರೀಮಾನ್ ಕಲ್ಕಿರ್ನೃಸಿಂಹಾರ್ಯಃ ಪ್ರತಿವಾದಿ ಭಯಂಕರಃ ।
ಪ್ರಕಾಶಯಾಮಿ ಗೀತಾಯಾಸ್ಸಾರಾಮೃತಮಿದಂ ಮಮ॥

ಗೀತಾಚಾರ್ಯಃ ಪರಮಪುರುಷಃ ಕಲ್ಕಿಸಿಂಹಾಹ್ವಯೋಽಹಂ
ನಾನಾಶಾಸ್ತ್ರ ಪ್ರವಚನಪಟುಸ್ಸರ್ವ ವೇದಾನ್ತವೇದ್ಯಃ ।
ಮೌಢ್ಯಂ ಹನ್ತುಂ ಸಕಲಜಗತಾಂ ಪಣ್ಡಿತಾನಾಂ ಗುರೂಣಾಂ
ದೃಪ್ತಾನಾಂ ಚ ಸ್ವಯಮಿಹ ಭುವಿ ಶ್ರೀಹರಿರ್ವಚ್ಮಿ ತತ್ತ್ವಮ್ ॥

ಸಾಮರಸ್ಯಂ ಹಿ ಸರ್ವೇಷಾಂ ಮತಾನಾಂ ಕ್ರಿಯತೇ ಮಯಾ ।
ಆಸ್ತಿಕಾನಾಂ! ಪರಂಬ್ರಹ್ಮ ಗೀತಾಚಾರ್ಯೋಽಸ್ಮಿ ಕಲ್ಕಿರಾಟ್ ॥
ಮನ್ಮತಂ ಸರ್ವಲೋಕಾನಾಂ ಸಮ್ಮತಂ ಭಗವನ್ಮತಮ್ ।
ಆಚಾರ್ಯಾಣಾನ್ತು ಸರ್ವೇಷಾಂ ಪ್ರಥಮೋಽಹಂ ಶ್ರಿಯಃಪತಿಃ ॥

ಏಕಂ ಮತಂ ಮಮ ಮತಂ ಭಗವನ್ಮತಾಖ್ಯಂ
ಸದ್ದರ್ಶನಂ ಸಕಲಸಾತ್ತ್ವಿಕಸೂರಿ ಸೇವ್ಯಮ್ ।
ಲೋಕಾ ಭಜನ್ತು ಸಕಲಾ ಅಪಿ ನಿರ್ವಿವಾದಾ
ಮಾಮೇವ ಕಲ್ಕಿನೃಹರಿಂ ಪರಮಾರ್ಥರೂಪಮ್ ॥

ಗೀತಾಚಾರ್ಯಸ್ಯ ಮೇ ವಿಷ್ಣೋಃ ಪರಸ್ಯ ಬ್ರಹ್ಮಣೋ ಹರೇಃ ।
ಶ್ರೀಮತಃ ಕಲ್ಕಿಸಿಂಹಸ್ಯ ಕೈಙ್ಕರ್ಯಂ ಪ್ರಿಯಮುತ್ತಮಮ್ ॥

## ಉಪೋದ್ಘಾತ.

ಶ್ರೀ ಭೂನೀಳಾದಿನಾಯಕನಾದ ಭಗವನ್ತನೇ ಶ್ರೀ ಮಹಾವಿಷ್ಣು ರೂಪಿಯಾದುದರಿಂದ ಇವನು ತನ್ನ ಅವತಾರಗಳಲ್ಲಿ ಮುಖ್ಯವಾದ ಶ್ರೀಕೃಷ್ಣಾವತಾರದಲ್ಲಿಯೇ ಗೀತಾಚಾರ್ಯತ್ವರೂಪವಾದ ತನ್ನ ಪ್ರಥಮಾಚಾರ್ಯತ್ವದ ವೈಭವವನ್ನು ಚೆನ್ನಾಗಿ ಪ್ರಕಟಪಡಿಸಿದ ನೆಂಬುದು ಸರ್ವಲೋಕವಿದಿತವಾಗಿಯೇ ಇದೆಯಷ್ಟೆ. ಈ ಶ್ರೀಕೃಷ್ಣ ರೂಪಿಯಾದ ಭಗವನ್ತನ ಮತವು ಇಂತಹುದೆಂದು ನಿರ್ಣಯಿ ಸಲು ಪೂರ್ವದಲ್ಲಿಯೇ ಆಯಾ ಭಾಷ್ಯಕಾರರು ಪ್ರಯತ್ನ ಪಟ್ಟಾಗ್ಯೂ ಸರ್ವಮತಸಮ್ಮತವಾದ ಶ್ರೀಭಗವನ್ಮತವೆಂಬ ಒಂದೇ ಮತವು ಈ ಲೋಕದಲ್ಲಿ ಅದ್ಯಾಪಿ ಪ್ರಚಾರಕ್ಕೆ ಬರದೆ ಇರುವುದ ರಿಂದ ಪರಸ್ಪರ ವಿವಾದಗಳೇ ಕಂಡುಬರುತ್ತವೆ. ಆಯಾಮತಸ್ಥರು ಅಸೂಯಾಮತ್ಸರಗ್ರಸ್ತರಾಗಿರುವುದರಿಂದ ಪರಸ್ಪರಸೌಹಾರ್ದವೂ ಐಕಮತ್ಯವೂ ಇಲ್ಲದೆ—“ನಾವುಗಳೆಲ್ಲರೂ ಸರ್ವಲೋಕಜನಕ ನಾದ ಭಗವನ್ತನ ಮಕ್ಕಳು; ನಾವುಗಳೆಲ್ಲರೂ ಅವನ ಭಕ್ತರೇ ಆದುದರಿಂದ ಪರಸ್ಪರ ಸೌಭ್ರಾತ್ರ-ಸೌಹಾರ್ದ-ಸೌಜನ್ಯಾದಿ ಗುಣ ಗಳಿಂದ ಕೂಡಿ ಐಕಮತ್ಯದಿಂದ ಅವನನ್ನೇ ಆರಾಧಿಸಿ ಅವನಿಗೆ ಪ್ರಿಯತಮರಾಗಿ ಕೃತಾರ್ಥರಾಗಬೇಕು”—ಎಂಬ ಜ್ಞಾನವೇ ಇಲ್ಲದೆ ಅದ್ಯಾಪಿ ಕಲಹಾಕುಲಚಿತ್ತರಾಗಿಯೇ ಇದಾರೆ. ಇನ್ತಹ ಕಲಹಗಳೆಲ್ಲವೂ ಕಲಿಯ ದುಶ್ಚೇಷ್ಟಿತಗಳೆಂದು ಪ್ರಾಜ್ಞರೆಲ್ಲರೂ ಹಿಂದೆಯೇ ನಿರ್ಣಯಿಸಿ ಇರುತ್ತಾರೆ. ಆದುದರಿಂದ ಈ ಕಲಹಾದಿ ರೂಪವಾದ ಕಲಿದುಶ್ಚೇಷ್ಟಿತಗಳನ್ನೆಲ್ಲಾ ನಿರ್ಮೂಲಮಾಡಿ ಪರಸ್ಪರ ಸೌಹಾರ್ದವೆಂಬ ಪರಮೋತ್ಕೃಷ್ಟವಾದ ಧರ್ಮವನ್ನೇ ಪ್ರತಿಷ್ಠಾ ಪಿಸುವುದಕ್ಕೋಸ್ಕರ ಗೀತಾಚಾರ್ಯನಾದ ನಾನೇ ಈಗ ಪುನಃ ಶ್ರೀಕಲ್ಕಿ —ನಾರಸಿಂಹ ಸ್ವರೂಪಿಯಾಗಿ ಅವತರಿಸಿ ಇರುತ್ತೇನೆ. ನನ್ನ ಅವತಾರದ ಮುಖ್ಯೋದ್ದೇಶಗಳನ್ನು ನಾನೇ ಪೂರ್ವದಲ್ಲಿ—

" ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ।
ಸಮ್ಭವಾಮಿ ಯುಗೇ ಯುಗೇ ॥ "—

ಎಂಬ ಗೀತಾವಚನದಿಂದ ಪ್ರಕಾಶಪಡಿಸಿರುತ್ತೇನಷ್ಟೆ. ಈಗಲೂ ಈ ಕಾಲಕ್ಕೆ ತಕ್ಕಂತೆ ನನ್ನ ಉದ್ದೇಶಗಳನ್ನು ಕೆಳಗಿನ ಶ್ಲೋಕಗಳಲ್ಲಿ ವಿವರಿಸುತ್ತೇನೆ.

ಕಲಿರ್ಹಿ ಕಲ್ಕಃ ಕಲಹಾತ್ಮಕೋ ಸೌ
ಕಲಿರ್ಹಿ ಷಡ್ವರ್ಗಮಹಾರಿರೂಪೀ ।
ಕಲಿರ್ಹಿ ದುಷ್ಟಾತ್ಮಕ ಪಾಪ್ಮರೂಪೀ
ಕಲಿಪ್ರಹನ್ತಾಽಸ್ಮಿ ಹಿ ಕಲ್ಕಿಸಿಂಹಃ ॥ ೧ ॥

ಕಲಿಃ ಪ್ರಚಾರೇ ಭವತೀಹ ತೀವ್ರಃ
ಪಾಶ್ಚಾತ್ತ್ಯದೇಶೇಷು ಹಿ ಯುದ್ಧರೂಪಃ ।
ಸ ಚ ಪ್ರಶಾಮ್ಯತ್ಪಧುನೈವ ಸಮ್ಯ
ಗಿತ್ಯೇವಮಾಜ್ಞಾ ಕಲಿನಾಶಿನೋ ಮೇ ॥ ೨ ॥

ಅಧರ್ಮನಿರ್ಮೂಲನ ಬದ್ಧದೀಕ್ಷಂ
ಧರ್ಮೈಕತಾನಂ ಭಜ ಮಾಂ ಶರಣ್ಯಮ್ ।
ಶ್ರೀಭೂಮಿನೀಳಾಪತಿಮಪ್ರಮೇಯಂ
ಶ್ರೀಕಲ್ಕಿರೂಪಂ ನರಸಿಂಹದೇವಮ್ ॥ ೩ ॥

ಶ್ರೀಯಾದವಾದ್ರೌ ಕಿಲ ಶಮ್ಬಲಾಖ್ಯೇ
ಪ್ರಾಪ್ತಾವತಾರೋಸ್ಮಿ ಪುರಾಣರೀತ್ಯಾ ।
ಶ್ರೀವಿಷ್ಣುಕೀರ್ತೇರ್ಭವನೇ ಪಿತುರ್ಮೇ
ಸದ್ಧರ್ಮಸಂಸ್ಥಾಪನ ವೈಭವಸ್ಯ ॥ ೪ ॥

ವಿಶ್ವಾಸಹೀನಾ ಮಯಿ ನಾಸ್ತಿಕಾಸ್ಸ್ಯು
ರ್ವಿಶ್ವಾಸಯುಕ್ತಾ ಮಮ ಸುಪ್ರಿಯಾಸ್ಸ್ಯುಃ ।
ಕೈಙ್ಕರ್ಯಸಕ್ತಾ ಮಯಿ ಭಕ್ತಿಯುಕ್ತಾ
ಅತ್ರೈವ ಮುಕ್ತಾ ಭುವಿ ಮತ್ಪ್ರಸಾದಾತ್ ॥ ೫ ॥

ಈ ಶ್ಲೋಕಗಳ ತಾತ್ಪರ್ಯ:—

೧. ಕಲಿಯು-ಅಧರ್ಮರೂಪವಾಗಿ ಕಲಹಾತ್ಮಕವಾಗಿಯೂ, ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಅರಿ ಷಡ್ವರ್ಗರೂಪಿಯಾಗಿಯೂ, ದುರಾತ್ಮರಾಗಿ ಲೋಕಕಂಟಕರಾಗಿರುವ ಆಸುರ ಪ್ರಕೃತಿಗಳ ಪಾಪಕೃತ್ಯರೂಪವಾಗಿಯೂ ಇರುವುದು. ಅನ್ತಹ ಕಲಿಯನ್ನು ಧ್ವಂಸಮಾಡಿ ಧರ್ಮ ಪ್ರತಿಷ್ಠಾಪನವಂ ಮಾಡುವುದಕ್ಕಾಗಿಯೇ ನಾನು ಕಲ್ಕಿ ಸಿಂಹನಾಗಿ ಅವತರಿಸಿ ಇರುತ್ತೇನೆ.

೨. ಕಲಿಯು-ಅತ್ಯನ್ತ ತೀವ್ರವಾಗಿ ಪಾಶ್ಚಾತ್ತ್ಯ ದೇಶಗಳಲ್ಲಿ ಪ್ರವರ್ಧಮಾನವಾಗಿ ಘೋರತಮವಾದ ಮಹಾಯುದ್ಧ ರೂಪವಾಗಿ ಪರಿಣಮಿಸಿ ಸುಮಾರು ೫ ವರ್ಷಗಳವರೆಗೆ (ಕ್ರಿ. ಶ. ೧೯೧೪-೧೯೧೯) ಈ ಭೂಮಂಡಲದಲ್ಲೆಲ್ಲಾ ವ್ಯಾಪಿಸಿ ತನ್ನ ದುಸ್ಸಹವಾದ ದುಷ್ಟಚೇಷ್ಟೆಗಳಿಂದ ಸಕಲ ಜನರಿಗೂ ಮಹಾ ಸನ್ತಾಪವನ್ನು ಉಂಟುಮಾಡಿದ್ದುದು ಸರ್ವವಿದಿತವಾಗಿಯೇ ಇದೆಯಷ್ಟೆ. ಹೋಲಿಸಿ ನೋಡಿದರೆ ಈ ಪಾಶ್ಚಾತ್ತ್ಯ ಮಹಾ ಯುದ್ಧವು ಸಮುದ್ರಪ್ರಾಯವಾಗಿಯೂ, ಪೂರ್ವಕಾಲದ ಮಹಾಭಾರತಯುದ್ಧವು ಬಿಂದುಪ್ರಾಯವಾಗಿಯೂ ತೋರುವುದೆಂದು ಸಪ್ರಮಾಣವಾಗಿ ನಾನೇ ಹಿಂದೆ ನಿರೂಪಿಸಿರುತ್ತೇನಷ್ಟೆ. ಕೌರವ-ಪಾಂಡವರ ಯುದ್ಧವಾದ ಆ ಮಹಾ ಭಾರತ ಯುದ್ಧವು ೧೮ ದಿನಗಳಲ್ಲಿಯೇ "ಧರ್ಮಕ್ಷೇತ್ರೇ ಕುರು ಕ್ಷೇತ್ರೇ" ಎಂಬಂತೆ ಈ ಭರತಮಂಡಲದ ಏಕದೇಶದಲ್ಲಿ ೧೮ ಅಕ್ಷೋಹಿಣೀ ಸೈನ್ಯಗಳೊಡನೆ ನಡೆದು ಸಮಾಪ್ತವಾಯಿತು. ಅಂತಹ ಬಿಂದುಪ್ರಾಯವಾದ ಭಾರತಯುದ್ಧಕಾಲದ ಉತ್ಕಟಾವಸ್ಥೆಯಲ್ಲಿ ಶ್ರೀ ಕೃಷ್ಣಾವತಾರವು ಈ ಲೋಕದಲ್ಲಿ ಪ್ರಕಾಶಿಸಿ ಧರ್ಮಪ್ರತಿಷ್ಠಾಪನವಂ ಮಾಡಿದುದು ಸರ್ವಜನ ವಿದಿತ

ವಾಗಿಯೇ ಇದೆ. ಸಮುದ್ರಪ್ರಾಯವಾದ ಈ ಕಾಲದ ಪಾಶ್ಚಾತ್ತ್ಯ ಮಹಾಯುದ್ಧಸಮಯದಲ್ಲಿ ಶ್ರೀ ಕಲ್ಕಿಸಿಂಹಾವತಾರವು ಈ ಲೋಕದಲ್ಲಿ ಪ್ರಕಾಶಿಸುತ್ತ—ಈ ಯುದ್ಧದ ಶಾಂತ್ರಿಗಾಗಿ ತನ್ನ ಮಹಾ ಸಂಕಲ್ಪವನ್ನು ಮಾಡಿದುದು ಈಗ ಅತ್ಯಂತ ವಿಶ್ವಸನೀಯವಾಗಿಯೇ ಪ್ರತ್ಯಕ್ಷವೇದ್ಯವಾಗಿಯೇ ಇದೆಯಷ್ಟೆ. ಇಂತಹ ಭಗವಂತನ ಸಂಕಲ್ಪವು ಯುದ್ಧಶಾಂತ್ರಿಗೆ ನಿಮಿತ್ತವಾಗಿದ್ದಾಗ್ಯೂ ಅದ್ಯಾಪಿ ಪ್ರಜೆಗಳ ಮನಸ್ಸಮಾಪಶಾಂತ್ರಿಯು ಉಂಟಾಗಿಲ್ಲವೆಂಬುದು ಈಗ ಭರತಮಂಡಲದ ಪ್ರಕೃತಸ್ಥಿತಿಯಿಂದಲೇ ವ್ಯಕ್ತವಾಗುತ್ತಿದೆಯಷ್ಟೆ. ಆದುದರಿಂದ ಈಗ ನನ್ನ ಸಂಕಲ್ಪವು ಕಾಲಾನುಗುಣವಾಗಿ (Peace ಎಂಬ) ಶಾಂತಿಯನ್ನೇ ಅಪೇಕ್ಷಿಸುವುದರಿಂದ ಶಾಂತಿಗೆ ವಿರೋಧವನ್ನು ಆಚರಿಸುವವರು ನನಗೆ ವಿರೋಧಿಗಳೆಂದು ನಾನು ನಿರ್ಣಯಿಸಬೇಕಾಗುವುದು. “ಶಾಂತಿರಸ್ತು-ಪುಷ್ಟಿರಸ್ತು-ತುಷ್ಟಿರಸ್ತು”—ಎಂಬ ನಮ್ಮ ಹಿರಿಯರ ಉದಾರತಮವಾದ ಸಂಕಲ್ಪವೇ ಸಕಲಲೋಕಗಳಿಗೂ ಶ್ರೇಯಸ್ಕರವಾಗಿಯೂ ಕ್ಷೇಮಕರವಾಗಿಯೂ ಇರುವುದರಿಂದ ಶ್ರೀ ಭಗವತ್ಸಂಕಲ್ಪವೂ ಇದೇ ರೀತಿಯಲ್ಲಿ ಈಗ ಪ್ರಕಾಶಿಸುತ್ತಿದೆಯೆಂದು ಶ್ರೀ ಕಲ್ಕಿಸಿಂಹನಾದ ನನ್ನ ಸಂಕಲ್ಪದಿಂದ ಎಲ್ಲರೂ ತಿಳಿದುಕೊಳ್ಳಬಹುದಾಗಿದೆ.

೩. ಅಧರ್ಮವನ್ನು ನಿರ್ಮೂಲವಮಾಡಿ ಧರ್ಮಪ್ರತಿಷ್ಠಾಪನವಂ ಮಾಡಲು ಬದ್ಧದೀಕ್ಷನಾದ ನನ್ನನ್ನೇ ಸಕಲರೂ ವಿಶ್ವಾಸಪೂರ್ವಕವಾಗಿ ಭಜಿಸಿ ಶರಣಾಗತರಾಗಿ ನಿತ್ಯಕೈಂಕರ್ಯನಿಷ್ಠರಾಗಿ ಕೃತಾರ್ಥರಾಗಬೇಕು. ಶ್ರೀಭೂನೀಳಾದಿನಾಯಕನಾದ ಶ್ರೀಕಲ್ಕಿನಾರಸಿಂಹದೇವನೆಂಬ ನನ್ನ ಸಂಕಲ್ಪಕ್ಕೆ ಅನುಗುಣವಾಗಿಯೇ ಎಲ್ಲರೂ ಸಕಲಕಾರ್ಯಗಳನ್ನೂ ಮಾಡುತ್ತ, ಮನೋವಾಕ್ಕಾಯಗಳಿಂದ ನನ್ನನ್ನೇ ಆರಾಧಿಸಿ ನನ್ನ ಅನುಗ್ರಹಕ್ಕೆ

ಪಾತ್ರರಾಗಿ ನನಗೆ ಪ್ರಿಯತಮರಾಗಬೇಕು. (ಇದೆಲ್ಲವೂ ನನ್ನ ಸ್ವಾರ್ಥಕ್ಕಾಗಿ ನಾನು ಹೇಳುವ ಮಾತಲ್ಲ; ಸಕಲಲೋಕೋಜ್ಜೀವನಕ್ಕಾಗಿ ಮಾಡುವ ಸದುಪದೇಶವು).

೪. ಶ್ರೀ ವಿಷ್ಣು ಪುರಾಣ (IV 24), ಶ್ರೀ ಭಾಗವತ (XII 2) ಇತ್ಯಾದಿ ಪುರಾಣ ಪ್ರಮಾಣವಚನಗಳಲ್ಲಿ ಶ್ರೀಕಲ್ಕಿರೂಪಿಯಾದ ಶ್ರೀ ಮಹಾವಿಷ್ಣುವಿನ ಅವತಾರಸೂಚಕವಾದ ಘಟ್ಟಗಳು ಇವೆ. ಅವುಗಳನ್ನು ಚೆನ್ನಾಗಿ ಪರಿಶೀಲಿಸಿದರೆ— "ಶಂಬಲಗ್ರಾಮದಲ್ಲಿ ಮುಖ್ಯನಾದ ಬ್ರಾಹ್ಮಣೋತ್ತಮನಾದ ವಿಷ್ಣು ಯಶಸ್ಸೆಂಬ ಮಹಾತ್ಮನ ಭವನದಲ್ಲಿ ಶ್ರೀ ಕಲ್ಕಿರೂಪಿಯಾದ ಭಗವಂತನು ಅವತರಿಸುತ್ತಾನೆ" ಎಂದು ಋಷಿಗಳ ಅಭಿಪ್ರಾಯವು ವ್ಯಕ್ತವಾಗುತ್ತದೆ. ಈ ಶಂಬಲ ಗ್ರಾಮವು ಯಾವುದು? ವಿಷ್ಣುಯಶಸ್ಸೆಂಬ ಬ್ರಾಹ್ಮಣೋತ್ತಮನು ಯಾರು?—ಎಂಬೀ ವಿವರವನ್ನು ವ್ಯಾಖ್ಯಾನಕರ್ತೃಗಳೂ ಪ್ರಕಾಶಪಡಿಸಿಲ್ಲ. ಪ್ರಾಯೇಣ ಅವತಾರ ರಹಸ್ಯವು ಗೋಪ್ಯವಾಗಿಯೇ ಇರುವುದರಿಂದ ಚೆನ್ನಾಗಿ ವ್ಯಕ್ತವಾಗಲಾರದು. ಆದಾಗ್ಯೂ ಈಗ ನನಗೆ ಊರ್ಧ್ವಲೋಕಗಳಿಂದ ಪ್ರಕಾಶಿತವಾದ ಪರಮಾರ್ಥಗಳನ್ನು ನಾನು ಈ ಲೋಕವಾಸಿಗಳಾದ ಜನರಿಗೆ ವಿಶ್ವಾಸಾರ್ಥವಾಗಿ ಸತ್ಯ ಪ್ರಮಾಣ ಪುರಸ್ಸರವಾಗಿ ಉದ್ಘೋಷಿಸಿ ಹೇಳಬೇಕಾಗಿದೆ. ಶ್ರೀ ಯಾದವಾದ್ರಿ ಮೇಲುಕೋಟೆ-ತಿರುನಾರಾಯಣ ಪುರವು (ಮೈಸೂರು ಸಂಸ್ಥಾನದಲ್ಲಿ ಶ್ರೀರಂಗಪಟ್ಟಣಕ್ಕೆ ೨೦ ಮೈಲಿಗಳ ದೂರದಲ್ಲಿ ಉತ್ತರಕ್ಕೆ ಪ್ರಕಾಶಿಸುವ ದಕ್ಷಿಣಬದರಿಕಾಶ್ರಮವೆಂಬ ದಿವ್ಯಕ್ಷೇತ್ರವು) ಅಷ್ಟೋತ್ತರ ಶತಸ್ಥಾನಸಾರವೆಂದು ಪ್ರಸಿದ್ಧವಾಗಿ ೧೦೮ ತಿರುಪತಿಗಳಲ್ಲಿ ಶ್ರೇಷ್ಠವಾದುದು. ಇದೇ ನನ್ನ ಅವತಾರಸ್ಥಲವಾದ ಶಂಬಲಗ್ರಾಮವು. ಇದಕ್ಕೆ ಆನಂದವಿಮಾನಕ್ಷೇತ್ರವೆಂದೂ ನಾಮಧೇಯವುಂಟು. (ಶಂ = ಸುಖಂ, ಆನಂದಃ; ಶಂ ಬಲ

ಯತೀತಿ-**ಶಂಬಲಃ**=ಆನಂದವೃದ್ಧಿಪ್ರದಃ) ಆದುದರಿಂದಲೇ ಆನಂದವೃದ್ಧಿಪ್ರದನಾದ ಆನಂದ ವಿಮಾನ ಕ್ಷೇತ್ರವೆಂಬ (ಮೇಲುಕೋಟೆ) ತಿರುನಾರಾಯಣಪುರವನ್ನೇ ಪುರಾಣ ಮುನಿಗಳು ಶಂಬಲಗ್ರಾಮವೆಂದು ಸೂಚಿಸಿರುತ್ತಾರೆ.

"ಶ್ರೀಯಾದವಾದ್ರೌ ಕಿಲ ಭಾತಿ ರಮ್ಯಂ
ಸುಜ್ಞಾನಮಾನಂದವಿಮಾನಮಾದ್ಯಮ್ ।
ಆನಂದವೃದ್ಧಿ ಪ್ರದಮೇವ ತಸ್ಮಾ
ದೇತತ್ಪುರಂ ಶಂಬಲನಾಮಧೇಯಮ್ ॥"

(ಶಂ=ಆನಂದಃ=ಪರಮಾತ್ಮ; ಬಲಾತ್—ಬಲರಾಮ ದ್ವಾರಾ ಅತ್ರ ಸಮ್ಪತ್ಕುಮಾರಃ ಪ್ರತಿಷ್ಠಾಪಿತ ಇತಿ **ಶಂಬಲಃ** ಎಂದೂ ವ್ಯುತ್ಪತ್ತಿಯುಂಟು. ಇಂತಹ ಸಾರತಮವಾದ ಜ್ಞಾನಮಂಟಪವೆಂಬ ಈ ದಿವ್ಯಕ್ಷೇತ್ರದಲ್ಲಿ ನಾನು ಶ್ರೀಮದ್ವೇದ ಮಾರ್ಗಪ್ರತಿಷ್ಠಾಪನಾಚಾರ್ಯರಾಗಿಯೂ ಉಭಯ ವೇದಾಂತ ಪ್ರವರ್ತಕಾಚಾರ್ಯರಾಗಿಯೂ ಸದ್ದರ್ಶನ ಸ್ಥಾಪಕಾಚಾರ್ಯ ರೆಂದು ಸುಪ್ರಸಿದ್ಧರಾಗಿಯೂ ಇದ್ದ ಶ್ರೀ॥ ಉ॥ ಪ್ರತಿವಾದಿ ಭಯಂಕರಂ-ತೊಂಡನೂರು--ಶಿಂಗಲಾಚಾರ್ಯಸ್ವಾಮಿಯವರ ಕುಮಾರನಾಗಿ ಅವತರಿಸಿದೆನು. ತಮ್ಮ ಹಿರಿಯರ ಪ್ರಭಾವ ದಿಂದಲೂ, ತಮ್ಮ ತೇಜಃಪ್ರಭಾವದಿಂದಲೂ ಈ ಮಹಾತ್ಮರೇ ಜಗದ್ವಿಖ್ಯಾತಕೀರ್ತಿಯುಳ್ಳವರಾಗಿದ್ದುದರಿಂದ (ವಿಷ್ಣು= ಜಗದ್ವ್ಯಾಪಿ; ಯಶಃ=ಕೀರ್ತಿಃ, ಯಸ್ಯ ಸಃ—**ವಿಷ್ಣುಯಶಾಃ** =ಜಗದ್ವಿಖ್ಯಾತಕೀರ್ತಿಃ) ಇವರೇ ವಿಷ್ಣುಯಶಸ್ಸೆಂಬ ಮಹ ನೀಯರು.

ಇಂತಹ `ವ್ಯಕ್ಷೇತ್ರದಲ್ಲಿ ಇಂತಹ ಮಹನೀಯರ ಕುಲದಲ್ಲಿ ಅವ ತರಿಸಿದ ನನ್ನ ಜಾತಕವು ಈಗ ಮುದ್ರಿತವಾಗಿ ಪ್ರಾಯೇಣ ಸರ್ವವಿದಿತವಾಗಿಯೇ ಇದೆಯಷ್ಟೆ-" **ಧೀಹಾಸೋಯಮ್**"

—ಎಂಬ ಅಕ್ಷರಸಂಖ್ಯಾಕ್ರಮದಿಂದ ೧೭೮೯ನೆಯ ಶಾಲಿವಾಹನ ಶಕ ವರ್ಷವಾದ ಪ್ರಭವಸಂವತ್ಸರದಲ್ಲಿ (ಕ್ರಿ. ಶ. ೧೮೬೭ನೆಯ ಏಪ್ರಿಲ್ ೭ನೇ ತಾರೀಖಿಗೆ ಸಮವಾದ) ಚೈತ್ರ ಶುದ್ಧ ತೃತೀಯಾ-ಭಾನುವಾರ-ವಿಾನ ಮಾಸ ತೇದಿ ೨೭ ಈ ಶುಭದಿನ ರಾತ್ರಿ ೧೦ ಘಂಟೆಯ ಸಮಯದಲ್ಲಿ—ಕೃತ್ತಿಕಾ ದ್ವಿತೀಯಪಾದದಲ್ಲಿ-ವೃಶ್ಚಿಕಲಗ್ನದಲ್ಲಿ ನನ್ನ ಜನನವೆಂದು ಹಿರಿಯರು ಬರೆದಿಟ್ಟಿರುವ ನನ್ನ ಜಾತಕದಿಂದ ತಿಳಿಯಬರುತ್ತದೆ. ಇದನ್ನು ಜ್ಯೌತಿಷಿಕರು ಚೆನ್ನಾಗಿ ಪರಿಶೀಲಿಸಿ ಲಗ್ನ ಸ್ಫುಟಾದಿಗಳಿಂದ ಪರಿಶೋಧಿಸಬಹುದು. ಸುಪ್ರಸಿದ್ಧರಾದ ಕೆಲವು ಮಂದಿ ಜ್ಯೌತಿಷಿಕರು ಈ ಜಾತಕವನ್ನು ಪರಿಶೀಲಿಸಿ ಇದರಲ್ಲಿ ಅನೇಕವಾದ ಉತ್ಕೃಷ್ಟರಾಜಯೋಗಗಳಿವೆಯೆಂದು ಸೂಚಿಸಿ ಇದರ ಪ್ರಭಾವವನ್ನು ಪ್ರಶಂಸಿಸಿ ಇರುತ್ತಾರೆ. ಅಂತಹ ರಾಜಯೋಗಗಳಲ್ಲಿ—(೧) ಅವತಾರಯೋಗ (೨) ಪಾರಿಜಾತಯೋಗ (೩) ಪರ್ವತಯೋಗ (೪) ಕಾಹಳಯೋಗ (೫) ಸುಖಯೋಗ (೬) ಉತ್ತಮಯೋಗ (೭) ಗಜಕೇಸರಿಯೋಗ (೮) ಶ್ರೀನಾಥಯೋಗ (೯) ಸಾರಸ್ವತಯೋಗ (೧೦) ವರಿಷ್ಠಯೋಗ-ಇತ್ಯಾದಿಗಳು. ಪ್ರಖ್ಯಾತವಾದುವು. ಈ ಅವತಾರದ ಸಮಯವೂ ಕೂಡ ಪುರಾಣಗಳಲ್ಲಿ ಸಾಮಾನ್ಯವಾಗಿ ಸೂಚಿಸಲ್ಪಟ್ಟಿದೆ. "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ॥"— ಎಂಬ ಗೀತಾವಚನಕ್ಕೆ ಅನುಗುಣವಾಗಿ ಅಧರ್ಮವು ಅತ್ಯುತ್ಕಟವಾಗಿ ಬೆಳೆದಿರುವಾಗಲೇ ಈ ಅವತಾರವೆಂದು ಸುವ್ಯಕ್ತವಾಗಿದೆಯಷ್ಟೆ. "ಕಲೌ ಪಂಚ ಸಹಸ್ರಾನ್ತೇ ವಿಷ್ಣುಸ್ತ್ಯಕ್ಷ್ಯತಿ ಮೇದಿನೀಮ್"— ಎಂಬಂತೆ ಈ ಕಲಿಯುಗದ ೫,೦೦೦ ವರ್ಷಗಳಲ್ಲಿಯೇ ಪ್ಲೇಗ್ ಮುಂತಾದ ಮಹಾವ್ಯಾಧಿ ರೂಪವಾಗಿ ರುದ್ರಶಕ್ತಿಯಾಗಿ

ಹರಡಿಕೊಂಡು ಯುದ್ಧಾದಿಗಳಿಂದ ಮಹಾಪ್ರಳಯದಂತೆ ಪ್ರಜಾಕ್ಷಯವಾಯಿತು. ಆದುದರಿಂದ ಈ ಪ್ರಕೃತ ಸಮಯವೇ ಅಂತಹ ಉತ್ಕಟಾವಸ್ಥೆಯನ್ನು ಸೂಚಿಸುತ್ತದೆ. ಈಗ ಈ ಲೋಕದಲ್ಲಿ ಉಂಟಾಗಿರುವ ನಾಸ್ತಿಕ್ಯ-ದುರಾಚಾರ-ಮಹಾಪಾತಕಾದಿಗಳನ್ನು ನೋಡಿದರೆ ಇದೇ ಉತ್ಕಟಾವಸ್ಥೆಯೆಂಬ ವಿಷಯದಲ್ಲಿ ಯಾವ ಆಸ್ತಿಕರಿಗೂ ಸಂಶಯವೇ ಉಂಟಾಗಲಾರದು. ಶ್ರೀ ವಿಷ್ಣು ಪುರಾಣ (IV 24), ಶ್ರೀ ಭಾಗವತ (XII 2)—ಇತ್ಯಾದಿ ಪ್ರಮಾಣಗಳಲ್ಲಿ ಕಲ್ಕಿ ಪ್ರಾದುರ್ಭಾವಕಾಲ ಸಮನಂತರ ಭಾವಿಯಾದ ಕೃತಯುಗಾರಂಭವು ಜ್ಯೋತಿಶ್ಶಾಸ್ತ್ರರೀತ್ಯಾ ಒಂದು ವಿಲಕ್ಷಣವಾದ ಗ್ರಹಯೋಗದ್ವಾರಾ ಈ ಪ್ರಕಾರ ಸೂಚಿಸಲ್ಪಟ್ಟಿದೆ.

"ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯೇ ಬೃಹಸ್ಪತಿಃ ।
ಏಕರಾಶೌ ಸಮೇಷ್ಯಂತಿ ತದಾ ಭವತಿ ತತ್ಕೃತಮ್ ॥"

(ಇದರ ಅರ್ಥ)—ಚಂದ್ರ, ಸೂರ್ಯ, ಗುರು—ಈ ಮೂರು ಗ್ರಹಗಳೂ (ಏಕರಾಶಿಯಾದ) ಕರ್ಕಟರಾಶಿಯಲ್ಲಿ ಪುಷ್ಯನಕ್ಷತ್ರದಲ್ಲಿ ಯಾವಾಗ ಸಹ ಪ್ರವೇಶವನ್ನು ಮಾಡುತ್ತವೆಯೋ ಆಗ ಈ ಕೃತಯುಗಾರಂಭವು ಈ ಲೋಕದಲ್ಲಿ ಪ್ರಕಾಶಿಸುವುದು. (ಇದು ಕಳೆದ ಸಿದ್ಧಾರ್ಥಿ ವರ್ಷದಲ್ಲಿ-ಮಹಾಯುದ್ಧ ಶಾಂತಿಸಮಯದಲ್ಲಿ ಪ್ರಕಾಶಕ್ಕೆ ಬಂತೆಂದು ಕೆಲವರು ಜ್ಯೌತಿಷಿಕರು ಹೇಳಿರುತ್ತಾರೆ. ಕ್ರಿ. ಶ. ೧೯೧೯ನೆಯ ಸಂವತ್ಸರವಾದ ಈ ಸಿದ್ಧಾರ್ಥಿ ಸಂವತ್ಸರದಲ್ಲಿ ನನಗೆ ವಯಸ್ಸು ೫೨; ಈಗ ಈ ಪ್ರಮೋದ ಸಂವತ್ಸರದ ಚೈತ್ರಮಾಸಕ್ಕೆ ೬೩ ವರ್ಷಗಳಾದುವು. ಈ ನನ್ನ ಅವತಾರದ ಮಾಹಾತ್ಮ್ಯವು ಕಳೆದ ಆನಂದವರ್ಷದಲ್ಲಿ ಯೋಗಮಹಿಮೆಯಿಂದ ಪ್ರಕಾಶಕ್ಕೆ ಬಂದುದರಿಂದ ೫ ವರ್ಷಗಳ ಸಮನಂತರ ಸಿದ್ಧಾರ್ಥಿ

ವರ್ಷದಲ್ಲಿ ಈ ಕೃತಯುಗಾರಂಭಸಮಯವೆಂದು ಅಂಗೀಕರಿಸಿದರೆ ಎಲ್ಲವೂ ಸಂಗತವಾಗಿಯೇ ಪರಿಗಣಿತವಾಗುವು ದೆಂದು ತೋರುತ್ತದೆ. ಇದೆಲ್ಲವನ್ನೂ ಊರ್ಧ್ವಲೋಕಗಳ ಪ್ರೇರಣೆಯಿಂದಲೇ ನಾನು ವ್ಯಕ್ತಪಡಿಸಿ ಇರುತ್ತೇನೆ).

ಇದಕ್ಕೆ ಅನುಗುಣವಾಗಿಯೇ ಶ್ರೀಶಠಾರಿಯೆಂಬ ಮಹಾತ್ಮರು "ನಮ್ಮಾಳ್ವಾರ್"—ಎಂಬ ನಾಮಧೇಯದಿಂದ ಸುಪ್ರಸಿದ್ಧರಾಗಿ ಈ ಕಲ್ಯಾರಂಭದಲ್ಲಿ ಅವತರಿಸಿ ನಾಲ್ಕುವೇದಗಳ ಸಾರರೂಪವಾಗಿ ರಚಿಸಿರುವ ನಾಲ್ಕು ದ್ರಾವಿಡ ದಿವ್ಯ ಪ್ರಬಂಧಗಳಲ್ಲಿ "**ತಿರುವಾಯ್ಮೊಳಿ**" ಎಂಬ ಸಾಮವೇದ ಸಾರರೂಪವಾದ ಮಹಾಪ್ರಬಂಧದ ೫ನೆಯ ಶತಕದ ೨ನೆಯ ದಶಕವಾದ "ಪೊಲಿಕ ಪೊಲಿಕ ಪೊಲಿಕ" ಎಂಬ ಪ್ರಬನ್ಧದಲ್ಲಿ ಈ ಕಲಿಯುಗವು ಕ್ಷಿಪ್ರವಾಗಿಯೇ (ಎಂದರೆ ಐದು ಸಾವಿರ ವರ್ಷಗಳ ಕಾಲದಲ್ಲೇ) ಮುಗಿದುಹೋಗುವುದೆಂತಲೂ ದಿವ್ಯಕೃತಯುಗಾರಂಭವಾಗುವುದೆಂತಲೂ ಶ್ರೀಕಲ್ಕಿರೂಪಿಯಾದ ಭಗವಂತನ ಅವತಾರವೇ ಪುರಾಣರೀತ್ಯಾ ಇಲ್ಲಿ ಸೂಚಿತವಾಗಿದೆಯೆಂದು ನನ್ನ **ಸಹಸ್ರಗಾಥಾರ ರತ್ನಾವಳಿಯ** ಪುಸ್ತಕದಲ್ಲಿ ಆ ದಶಕದಲ್ಲಿ ಟಿಪ್ಪಣಿಯಲ್ಲಿ ಸುವ್ಯಕ್ತವಾಗಿದೆ. ಎಲ್ಲರೂ ಈ ವಿಷಯದಲ್ಲಿ ಪರಿಪೂರ್ಣ ವಿಶ್ವಾಸ ಶಾಲಿಗಳಾಗಿ ಕೃತಾರ್ಥರಾಗಬೇಕು.

೫. ನನ್ನಲ್ಲಿ ವಿಶ್ವಾಸಹೀನರೆಲ್ಲರೂ ನಾಸ್ತಿಕರೆಂತಲೂ, ನನ್ನಲ್ಲಿ ವಿಶ್ವಾಸಶಾಲಿಗಳೆಲ್ಲರೂ ಆಸ್ತಿಕರೆಂತಲೂ ಪರಿಗಣಿಸಲ್ಪಡುವರು. ಆಸ್ತಿಕರಾದ ಭಕ್ತರೆಲ್ಲರೂ ನಿತ್ಯಕೈಂಕರ್ಯಸಕ್ತರಾಗಿ-ನನಗೆ ಅನ್ತರಂಗಪ್ರಿಯರಾದರೆ ಈ ಭೂಲೋಕದಲ್ಲಿಯೇ ಮುಕ್ತರೆಂದು ಭಾವಿಸಲ್ಪಟ್ಟು ನನ್ನ ಅನುಗ್ರಹಕ್ಕೆ ಪಾತ್ರರಾಗಿ ನಿರತಿಶಯಾನಂದವನ್ನು ಪಡೆಯುವರು.—ಎಂದು ನನ್ನ

ಸಿದ್ಧಾಂತಸಾರವು ಈ ಐದು ಶ್ಲೋಕಗಳಿಂದ ಸಂಗ್ರಹೇಣ ಸೂಚಿಸಲ್ಪಟ್ಟಿದೆ).

## ಗೀತಾಸಿದ್ಧಾಂತ ಸಾರ

ಶ್ರೀಕೃಷ್ಣ ಸಿದ್ಧಾಂತವಾದ ನನ್ನ ಪೂರ್ವಕಾಲದ ಗೀತಾ ಸಿದ್ಧಾಂತಕ್ಕೂ ಈ ಕಾಲದ ನನ್ನ ಶ್ರೀಕಲ್ಕಿಸಿದ್ಧಾಂತಕ್ಕೂ ಕೆಲವು ವಿಷಯಗಳಲ್ಲಿ ವ್ಯತ್ಯಾಸಗಳು ಕಂಡು ಬಂದಾಗ್ಯೂ ಧರ್ಮ ಪ್ರತಿಷ್ಠಾಪನರೂಪವಾದ ಮುಖ್ಯೋದ್ದೇಶವಲ್ಲಿ ಯಾವ ವ್ಯತ್ಯಾಸವೂ ಇರಲಾರದು. ದುಷ್ಟನಿಗ್ರಹದ್ವಾರಾ ಸಾಧುಪರಿತ್ರಾಣವಂ ಮಾಡಬೇಕೆಂದು ಆಗ ಸಂಕಲ್ಪವು ಬೆಳೆದು ಮಹಾಭಾರತಯುದ್ಧಾದಿಗಳಲ್ಲಿ ಭೂಭಾರ ನಾಶವು ಆಯಿತೆಂದು ಸುವ್ಯಕ್ತವಾಗಿದೆಯಷ್ಟೆ. ಈಗ ಶ್ರೀಕಲ್ಕಿರೂಪಿಯಾದ ನನಗೆ ಯುದ್ಧಾದಿ ಘೋರಕೃತ್ಯಗಳಲ್ಲಿ ಸುತರಾಂ ಅಭಿರುಚಿಯು ಇಲ್ಲದೆ ಇರುವುದರಿಂದ ಉಪದೇಶದ್ವಾರಾ ಸಕಲಚೇತನರನ್ನೂ ವಶೀಕರಿಸಿ ಸರ್ವರಿಗೂ ಶಾಂತಿ-ಪುಷ್ಟಿ-ತುಷ್ಟಿ-ಸಮೃದ್ಧಿಗಳನ್ನೇ ಬೆಳೆಸಬೇಕೆಂಬ ಉದಾರತಮವಾದ ಸಂಕಲ್ಪವು ಉಂಟಾಗಿರುತ್ತದೆ. ಇದಕ್ಕೆ ತಕ್ಕಂತೆ ಎಲ್ಲರೂ ಮುಮುಕ್ಷುಗಳಾಗಿ ನನ್ನಲ್ಲಿ ಭಕ್ತಿನಿಷ್ಠರಾಗಿಯೂ ಕೈಂಕರ್ಯನಿಷ್ಠರಾಗಿಯೂ ಇದ್ದುಕೊಂಡು ನನಗೆ ಪ್ರಿಯತಮರಾಗಿ ಇಲ್ಲಿಯೇ ಮುಕ್ತಪ್ರಾಯರಾಗಿ ನಿರತಿಶಯಾನಂದವಂ ಪಡೆಯಬೇಕೆಂಬ ಸದುಪದೇಶಗಳನ್ನೇ ಎಲ್ಲರಿಗೂ (ಜಾತಿಲಿಂಗಾದಿಭೇದಗಳಿಲ್ಲದೆ) ನಾನು ಮಾಡುತ್ತಿರುವುದು ಪ್ರತ್ಯಕ್ಷಸಿದ್ಧವಾಗಿಯೇ ಇದೆಯಷ್ಟೆ. ಬುದ್ಧಾವತಾರದಲ್ಲಿಯೂ ನನಗೆ ಈ ಪ್ರಕಾರವಾದ ಶಾಂತಿರಸದಲ್ಲೇ ಅಭಿರುಚಿಯು ಪರಿಪೂರ್ಣವಾಗಿ ಬೆಳೆದುದರಿಂದ ಕ್ಷತ್ರಿಯ ಧರ್ಮವಂ ಬಿಟ್ಟು ನಾನು ಅಹಿಂಸಾದಿರೂಪವಾದ ಧರ್ಮವನ್ನೇ ಬೋಧಿಸುತ್ತ ಈ ಲೋಕದಲ್ಲಿ ಧರ್ಮಾಚಾರ್ಯಪದವಿಯಲ್ಲಿ ಅಗ್ರೇಸರನಾಗಿ "ಬುದ್ಧೋಧರ್ಮರಾಜಸ್ತಥಾಗತಃ"—ಎಂದು ಕೀರ್ತಿತನಾದೆನು. ಯದ್ಯಪಿ (ಗ)

"ರಾಮೋವಿಗ್ರಹವಾನ್ ಧರ್ಮಃ" (೨) "ಕೃಷ್ಣಂ ಧರ್ಮಂ ಸನಾತನಮ್" (೩) "ಬುದ್ಧೋಧರ್ಮರಾಜ ಸ್ತಥಾಗತಃ" (೪) "ಕಲ್ಕಿರ್ಧರ್ಮಪತಿರ್ಹರಿಃ"—ಇತ್ಯಾದಿ ಪ್ರಮಾಣಗಳಿಂದ ಶ್ರೀ ಭಗವದವತಾರಗಳೆಲ್ಲಾ ಧರ್ಮಮೂರ್ತಿಗಳೆಂದು ಪರಿಗಣಿತರಾದಾಗ್ಯೂ ತತ್ಕಾಲೋಚಿತವಾಗಿ ಧರ್ಮಲಕ್ಷಣದಲ್ಲಿಯೇ ವೈಲಕ್ಷಣ್ಯಉಂಟೆಂದು ಅವಶ್ಯವಾಗಿ ಅಂಗೀಕರಿಸಬೇಕಾಗಿದೆ. ಶ್ರೀರಾಮಾವತಾರದ ಧರ್ಮಕ್ಕೂ ಶ್ರೀ ಕೃಷ್ಣಾವತಾರದ ಧರ್ಮಕ್ಕೂ ಎಷ್ಟೋ ತಾರತಮ್ಯವಿದೆ. ಹೀಗೆಯೇ ಶ್ರೀಕೃಷ್ಣಾವತಾರದ ಧರ್ಮಕ್ಕೂ ಬುದ್ಧಾವತಾರದ ಧರ್ಮಕ್ಕೂ ಎಷ್ಟೋ ತಾರತಮ್ಯವಿದೆ. ಅದೇರೀತಿಯಲ್ಲಿ ಬುದ್ಧಾವತಾರದ ಧರ್ಮಕ್ಕೂ ಶ್ರೀ ಕಲ್ಕಿರೂಪಿಯಾದ ನನ್ನ ಈ ಕಾಲದ ಧರ್ಮಕ್ಕೂ ಎಷ್ಟೋ ತಾರತಮ್ಯವು ಕಂಡುಬರುತ್ತಿದೆ. ಇದನ್ನೆಲ್ಲಾ ವರ್ಣಿಸಲು ಅನೇಕ ಮಹಾಪ್ರಬಂಧಗಳನ್ನೇ ರಚಿಸಬೇಕಾಗಿದೆ. ಪ್ರಕೃತ ಕಾಲದಲ್ಲಿ ದುಷ್ಟನಿಗ್ರಹಕ್ಕಾಗಿ ನಾನು ಶಸ್ತ್ರಧಾರಿಯಾಗಿ ಇಲ್ಲದೆ ಇದ್ದರೂ ಅಂತಹ ದುಷ್ಟರನ್ನೂ ವಶೀಕರಿಸುವುದಕ್ಕಾಗಿ ನಾನು ಶಾಪವಾಗ್ರೂಪವಾದ ಖಡ್ಗವನ್ನು ಆಗಾಗ್ಯೆ ಪ್ರಯೋಗಿಸಬೇಕಾಗಿ ಬರುವುದು. ಇಂತಹ ಅಕ್ಷರರೂಪವಾದ ಖಡ್ಗಗಳೂ ಕೂಡ ತಮ್ಮ ತಮ್ಮ ಕೃತ್ಯಗಳನ್ನು ಚೆನ್ನಾಗಿ ಮಾಡುತ್ತ ಸರ್ವಚೇತನರನ್ನೂ ವಶೀಕರಿಸಿ ನನಗೆ ಸರ್ವತ್ರ ಜಯವನ್ನೇ ಸಂಪಾದಿಸಿ ಕೊಡುವುವು—ಎಂದು ನಾನು ದೃಢವಾಗಿ ನಂಬಿ ಇರುತ್ತೇನೆ.

---

# ಗೀತಾತಾತ್ಪರ್ಯ ಸಾರಾಮೃತ

---

೧ನೆಯ ಪ್ರಕರಣ

## ಗೀತೋಪದೇಶದ ಉದ್ದೇಶ

ಶ್ರೀ ಕೃಷ್ಣನು ಅರ್ಜುನನಿಗೆ ಯುದ್ಧರಂಗದಲ್ಲಿ ಗೀತೋಪದೇಶವನ್ನು ಮಾಡಲು ಉದ್ದೇಶವೇನೆಂದು ಪರಿಶೀಲಿಸಬೇಕಾಗಿದೆ. ಶ್ರೀಯಾಮುನಾಚಾರ್ಯರು (ಆಳವಂದಾರ್) ಗೀತಾರ್ಥ ಸಂಗ್ರಹವೆಂಬ ತಮ್ಮ ಪ್ರಬಂಧದಲ್ಲಿ ಈ ಉದ್ದೇಶವನ್ನು ಶ್ಲೋಕರೂಪವಾಗಿ ಈ ಪ್ರಕಾರ ವಿವರಿಸಿರುತ್ತಾರೆ:—

" ಅಸ್ಥಾನ ಸ್ನೇಹ ಕಾರುಣ್ಯ
ಧರ್ಮಾಧರ್ಮ ಧಿಯಾ ಕುಲಮ್ ।
ಪಾರ್ಥಂ ಪ್ರಪನ್ನಮುದ್ದಿಶ್ಯ
ಶಾಸ್ತ್ರಾವತರಣಂ ಕೃತಮ್ ॥ "

ಈ ಶ್ಲೋಕದ ತಾತ್ಪರ್ಯವೇನೆಂದರೆ:—ಅಪಾತ್ರ (ಅಸ್ಥಾನ) ರೂಪರಾದ ಕೌರವರು ಆಸುರಪ್ರಕೃತಿಗಳಾಗಿಯೂ ಆಜನ್ಮ ಶತ್ರುಗಳಾಗಿಯೂ ಇದ್ದುದರಿಂದ ಅವರಲ್ಲಿ (ನಮ್ಮ ಅಣ್ಣ ತಮ್ಮಂದಿರೆಂಬ) ಸ್ನೇಹವನ್ನೂ ಕಾರುಣ್ಯವನ್ನೂ ತತ್ಕಾಲದಲ್ಲಿ ಯುದ್ಧರಂಗದಲ್ಲಿ ಬೆಳೆಸಿ, ಅಧರ್ಮ(ಅಕರ್ತವ್ಯ)ದಲ್ಲಿ ಧರ್ಮ(ಕರ್ತವ್ಯ)ಬುದ್ಧಿಯನ್ನೂ ಧರ್ಮ(ಕರ್ತವ್ಯ)ದಲ್ಲಿ ಅಧರ್ಮ(ಅಕರ್ತವ್ಯ)ಬುದ್ಧಿಯನ್ನೂ ಉಳ್ಳವನಾಗಿ ವ್ಯಾಕುಲ ಚಿತ್ತನಾದ ಅರ್ಜುನನು ಶರಣಾಗತನಾಗಿ (ಪ್ರಪನ್ನನಾಗಿ) ಪ್ರಾರ್ಥಿಸಿದುದರಿಂದ ಅವನ ಸಂದೇಹ ನಿವೃತ್ತಿಗಾಗಿ ಈ ಶಾಸ್ತ್ರವು ಅವತರಿಸಿತೆಂದು ತಾತ್ಪರ್ಯ.

ಅರ್ಜುನನ ಚಿತ್ತವೃತ್ತಿಯನ್ನು ಶೋಧಿಸಿ ನೋಡಿದರೆ ಇವನು ತತ್ಕಾಲದಲ್ಲಿ ಭ್ರಾಂತನಾಗಿ ಕೃತ್ಯಾಕೃತ್ಯ ವಿವೇಕಶೂನ್ಯನಾಗಿ ಇದ್ದನೆಂದು ವ್ಯಕ್ತವಾಗುತ್ತದೆ. ಯುದ್ಧಸನ್ನಾಹವಂ ಮಾಡುವುದಕ್ಕೆ ಪೂರ್ವದಲ್ಲಿಯೇ ಪಾಂಡವರೆಲ್ಲರೂ ಸೇರಿ ಶ್ರೀಕೃಷ್ಣನೊಡನೆ ಆಲೋಚಿಸಿ ಆಸುರಪ್ರಕೃತಿಗಳಾದ ಆಜನ್ಮ ಶತ್ರುಗಳಾಗಿ ದ್ರೋಹಬುದ್ಧಿಯಂ ಮಾಡಿದ ಕೌರವರನ್ನು ಯುದ್ಧದಲ್ಲಿ ಕೊಂದು ರಾಜ್ಯವನ್ನು ಗೆಲ್ಲಬೇಕೆಂದು ನಿಶ್ಚಯಿಸಿದರಷ್ಟೆ. ಹೀಗಿರುವಲ್ಲಿ—ಅರ್ಜುನನು ಯುದ್ಧಕ್ಕೆ ಸನ್ನದ್ಧನಾಗಿ ಸೈನ್ಯದೊಡನೆ ಯುದ್ಧರಂಗಕ್ಕೆ ಬಂದು ನಿಂತು ತನ್ನ ಸಾರಥಿಯಾದ ಶ್ರೀ ಕೃಷ್ಣನನ್ನು ನೋಡಿ, ಉಭಯ ಸೇನಾಬಲ ಪರೀಕ್ಷೆಯನ್ನು ಮಾಡಲುದ್ಯುಕ್ತನಾಗಿ, "ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ" ಎಂದು ಹೇಳಲು ಶ್ರೀ ಕೃಷ್ಣನು ಉಭಯ ಸೇನೆಗಳ ಮಧ್ಯೆ ರಥವನ್ನು ನಿಲ್ಲಿಸಿದನು. ಆಗ ಅರ್ಜುನನು ಎರಡು ಸೈನ್ಯಗಳಲ್ಲೂ ವೀರಾಗ್ರಗಣ್ಯರಾದವರನ್ನೆಲ್ಲಾ ನೋಡಿ ಸೈನ್ಯಗಳ ಬಲಾಬಲವನ್ನೂ ನೋಡಿ ತತ್ಕಾಲದಲ್ಲಿ ಒಂದು ವಿಧವಾದ ಮಾಯಾಮೋಹಕ್ಕೆ ವಶ್ಯನಾದನು. ಅದೆಂತೆಂದರೆ—"ನಮಗೆ ಕೌರವರು ಸಮೀಪ ಬಂಧುಗಳಾಗಿ ಸೋದರರಂತೆ ಪ್ರೀತಿಪಾತ್ರರಾದುದರಿಂದಲೂ, ಭೀಷ್ಮದ್ರೋಣಾದಿಗಳು ನಮಗೆ ಆಚಾರ್ಯರಾದುದರಿಂದಲೂ, ನಾವು ಇವರನ್ನು ಯುದ್ಧದಲ್ಲಿ ಸುತರಾಂ ಕೊಲ್ಲಕೂಡದು. ಕೊಂದರೆ ಮಹಾಪಾತಕವು ಬರುವುದು. ಇವರನ್ನು ಕೊಂದು ಶೋಣಿತದಿಗ್ಧವಾದ ರಾಜ್ಯವನ್ನು ಗೆದ್ದು ಅನುಭವಿಸುವುದರಿಂದ ನಮಗೇನು ಫಲವುಂಟಾಗುವುದು? ಅದರಿಂದ ನಮಗೇನು ಸಂತೋಷ? ನಮ್ಮನ್ನು ಕೌರವರು ಕೊಂದರೂ ಕೊಲ್ಲಲಿ. ನಾವು ಅವರನ್ನು ಕೊಲ್ಲಕೂಡದು, ನಮಗೆ ರಾಜ್ಯವೂ ಬೇಡ, ಅದರಿಂದ ಉಂಟಾಗುವ ಫಲವೂ ಬೇಡ. ನಾನು ಯುದ್ಧಮಾಡುವುದೇ ಇಲ್ಲ." ಎಂದು ನಿಶ್ಚಯಿಸಿ ಆಯುಧಗಳನ್ನೆಲ್ಲಾ ಕೆಳಗೆ ಹಾಕಿ ಶ್ರೀ ಕೃಷ್ಣನನ್ನು ನೋಡಿ "ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋ

ಜಯಿಸಿ ಕೇಶವ" ಎಂದು ಹೇಳಿ, "ಇಂತಹ ಘೋರಪಾತಕ ಕರ್ಮದಲ್ಲಿ ನೀನು ನನ್ನನ್ನು ಏತಕ್ಕೆ ಪ್ರೇರಿಸುತ್ತಿದ್ದೀಯೆ? ನನ್ನನ್ನು ನರಕದಲ್ಲಿ ಬೀಳುವಂತೆ ಮಾಡಿ ಕೈ ಬಿಡಲು ಉದ್ದೇಶಿಸಿರುತ್ತೀಯೋ!" ಎಂದು ಕೇಳಿದನು. ಹೀಗೆ ಮೋಹಾವಿಷ್ಟನಾದ ಅರ್ಜುನನ ಬುದ್ಧಿಯು ತತ್ಕಾಲದಲ್ಲಿ ವಿರಕ್ತಾಗ್ರೇಸರರಾದ **ತಾಪಸ ಮುನಿವರ್ಯರ** ಚಿತ್ತವನ್ನು ಅನುಸರಿಸಿ ಇದ್ದುದರಿಂದ ಇವನನ್ನು ಕ್ಷತ್ರಿಯ ಕೃತ್ಯವಾದ ಯುದ್ಧ ಕರ್ಮದಿಂದ ನಿವೃತ್ತನಾಗುವಂತೆ ಮಾಡಿತು. ಅರ್ಜುನನು ತಾನು ಧರ್ಮಾಧರ್ಮ ಪರಿಶೀಲನವನ್ನು ಚೆನ್ನಾಗಿ ಮಾಡಿರುವ ಪ್ರಾಜ್ಞನೆಂದು ತಿಳಿದುಕೊಂಡಿದ್ದುದರಿಂದ ಹೀಗೆ ಶ್ರೀಕೃಷ್ಣನೊಡನೆ ಹೋರಾಡುತ್ತ ಯುದ್ಧರೂಪವಾದ ಪಾತಕಕೃತ್ಯದಲ್ಲಿ ಪ್ರವೇಶಿಸುವುದಿಲ್ಲವೆಂದು ಹೇಳಿಬಿಟ್ಟನು. ಹೀಗೆ ಅರ್ಜುನನು ಸರ್ವೇಶ್ವರನಾದ ಶ್ರೀ ಕೃಷ್ಣನಿಗೇ ಧರ್ಮ ತತ್ವವನ್ನು ಬೋಧಿಸುವಂತೆ ತಾನು ಪ್ರಾಜ್ಞನೆಂದು ಭಾವಿಸಿ ಅಹಂಕಾರಗ್ರಸ್ತನಾಗಿದ್ದುದರಿಂದ ಶ್ರೀ ಕೃಷ್ಣನು ಇವನನ್ನು ನೋಡಿ "ಪ್ರಜ್ಞಾವಾದಾಂಶ್ಚ ಭಾಷಸೇ" ಎಂದು ಹೇಳಿ, "ನೀನು ಸ್ವಯಂ ಪ್ರಾಜ್ಞನಂತೆ ಸರ್ವಜ್ಞನಾದ ನನಗೇ ಧರ್ಮ ತತ್ವವನ್ನು ಉಪದೇಶಿಸಲಾರಂಭಿಸಿರುತ್ತೀಯೆ. ನಿನಗೆ ಕ್ಷತ್ರಿಯ ಧರ್ಮವಾದ ಯುದ್ಧದಿಂದ ನಿವೃತ್ತಿಯೂ ಅಧರ್ಮವಾದುದರಿಂದ ಇಂತಹ ಕಶ್ಮಲ ಬುದ್ಧಿಯು ನಿನಗೆ ಎಲ್ಲಿಂದ ಬಂತು? ವಿರಕ್ತನಂತೆ ತಾಪಸವೃತ್ತಿಯನ್ನು ಅವಲಂಬಿಸೋಣವು ನಿನಗೆ ಅಧರ್ಮವು. ಇದನ್ನು ಬಿಟ್ಟು ಯುದ್ಧಕ್ಕೆ ಸನ್ನದ್ಧನಾಗು" ಎಂದು ಉಪದೇಶಿಸಿದನು.

ಆದಾಗ್ಯೂ ಅರ್ಜುನನು ತನ್ನ ವಾದವಂ ಬಿಡದೆ ಸಂಶಯಾಕುಲಚಿತ್ತನಾಗಿ ತಾನು ಕೇಳಿದ್ದ ನಾನಾ ಶಾಸ್ತ್ರಗಳಪ್ರಕ್ರಿಯೆಗಳನ್ನು ಮನಸ್ಸಿನಲ್ಲಿ ಸಾಮಾನ್ಯತಃ ಸ್ಮರಿಸಿ ಭ್ರಾಂತನಾಗಿಯೇ ಇದ್ದು "ನಾನು ಯುದ್ಧಮಾಡುವುದಿಲ್ಲ" ಎಂದು ಹಠವಂ ಹಿಡಿದುದರಿಂದ

ಶ್ರೀ ಕೃಷ್ಣನು ಇವನಿಗೆ ಕ್ರಮವಾಗಿ ಸಾಂಖ್ಯಯೋಗ, ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಾದಿ, ನಾನಾ ಶಾಸ್ತ್ರಪ್ರಕ್ರಿಯೆಗಳನ್ನು ಚೆನ್ನಾಗಿ ವಿವರಿಸಿ ಇವನ ಹೃದಯ ಶೋಧನವಂ ಮಾಡಲಾರಂಭಿಸಿದನು. ಈ ಪ್ರಕಾರ ಹದಿನೆಂಟು ಅಧ್ಯಾಯಗಳಲ್ಲೂ ಶ್ರೀ ಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದ ವೇದಾಂತ ತತ್ವಗಳಿಗೆಲ್ಲಾ ಫಲವು ಅರ್ಜುನನನ್ನು ಯುದ್ಧಕ್ಕೆ ಪ್ರೇರಿಸುವ ಕಾರ್ಯವೇ ಎಂದು ಸಾಮಾನ್ಯವಾಗಿ ತೋರುತ್ತದೆ. ಆದರೂ ಶ್ರೀ ಕೃಷ್ಣನ ಉದ್ದೇಶವು —ಅರ್ಜುನ ವ್ಯಾಜದಿಂದ ಮಾಡಿದ ಈ ಉಪದೇಶವು ಸಕಲ ಲೋಕೋಜ್ಜೀವನವಾಗಿ ಪರಿಣಮಿಸಿ ಸರ್ವಚೇತನ ಮೋಕ್ಷಸಾಧನವಾಗಲಿ—ಎಂದು ಸುವ್ಯಕ್ತವಾಗಿ ಪ್ರಕಾಶಿಸುತ್ತದೆಯೆಂದು ಮಹನೀಯರಾದ ಆಚಾರ್ಯವರ್ಯರೆಲ್ಲರೂ ಅಂಗೀಕರಿಸಿರುತ್ತಾರೆ.

---

ಶ್ರೀ

೨ನೆಯ ಪ್ರಕರಣ

## ಗೀತಾಶಾಸ್ತ್ರದ ಪರಮ ರಹಸ್ಯ

ಗೀತಾಶಾಸ್ತ್ರವು ೧೮ ಅಧ್ಯಾಯಗಳಾಗಿ ಈಗ ಲೋಕದಲ್ಲಿ ಪ್ರಚಾರದಲ್ಲಿರುವುದರಿಂದ, ಭಾಷ್ಯಕಾರರು ಇವುಗಳನ್ನು ಮೂರು ಪಂಗಡವಾಗಿ ಮಾಡಿ ಮೊದಲನೆಯ ಆರು ಅಧ್ಯಾಯಗಳನ್ನು ಪ್ರಥಮಷಟ್ಕವೆಂತಲೂ, ಎರಡನೆಯ ಆರು ಅಧ್ಯಾಯಗಳನ್ನು ದ್ವಿತೀಯಷಟ್ಕವೆಂತಲೂ, ಮೂರನೆಯ ಆರು ಅಧ್ಯಾಯಗಳನ್ನು ತೃತೀಯಷಟ್ಕವೆಂತಲೂ ವಿಂಗಡಿಸಿ ಇರುತ್ತಾರೆ.

ಈ ಮೂರುಷಟ್ಕಗಳಲ್ಲಿ ಪ್ರಥಮಷಟ್ಕವು ಕರ್ಮಯೋಗ ಜ್ಞಾನಯೋಗ ಪರವೆಂತಲೂ, ದ್ವಿತೀಯ ಷಟ್ಕವು ಭಕ್ತಿಯೋಗ ಪರವೆಂತಲೂ, ತೃತೀಯ ಷಟ್ಕವು ಪ್ರಪತ್ತಿಯೋಗ ಪರವೆಂತಲೂ ಗೀತಾಚಾರ್ಯನ ಅಭಿಪ್ರಾಯವನ್ನು ತಿಳಿದ ಪ್ರಾಜ್ಞರಾದ ಆಚಾರ್ಯರು ಅಂಗೀಕರಿಸಿರುತ್ತಾರೆ. ಗೀತಾಚಾರ್ಯನಿಗೆ ಮುಖ್ಯೋದ್ದೇಶವು ಪ್ರಪತ್ತಿಯೋಗೋಪದೇಶವೇ ಎಂದು ಸುವ್ಯಕ್ತವಾಗಿದೆ. ಕೊನೆಯಲ್ಲಿ "ಸರ್ವಧರ್ಮಾ ಪರಿತ್ಯಜ್ಯ—" ಎಂಬ ಚರಮಶ್ಲೋಕವನ್ನು ಬೋಧಿಸುವುದಕ್ಕೆ ಮುಂಚೆ—"ಸರ್ವಗುಹ್ಯತಮಂ ಭೂಮ ಶೃಣುಮೇ ಪರಮಂ ವಚಃ" ಎಂದು ಹೇಳಿ ಇದೇ ಪರಮ ರಹಸ್ಯವೆಂದು ಉಪದೇಶಿಸಿರುವುದರಿಂದ ಪ್ರಪತ್ತಿಯೋಗದಲ್ಲಿಯೇ ಶ್ರೀ ಕೃಷ್ಣನ ಮುಖ್ಯ ತಾತ್ಪರ್ಯವು. ಭಕ್ತಿಯೋಗವೂ ಕೂಡ ಈ ಪ್ರಪತ್ತಿ ಯೋಗಕ್ಕೆ ಅಂಗಭೂತವಾದುದು. ಕರ್ಮಯೋಗ ಜ್ಞಾನಯೋಗಗಳು ಭಕ್ತಿಯೋಗಕ್ಕೆ ಅಂಗರೂಪವಾದುವುಗಳು. ಈ ಪ್ರಕಾರ ಅಂಗಾಂಗಿ ಭಾವವನ್ನು ತಿಳಿದುಕೊಂಡರೇನೇ ಗೀತಾಚಾರ್ಯನ ಮುಖ್ಯತಾತ್ಪರ್ಯವು ವ್ಯಕ್ತವಾಗುವುದು. ಇಲ್ಲದಿದ್ದರೆ ನಾನಾ ಶಾಸ್ತ್ರಪ್ರಕ್ರಿಯೆಗಳಿಂದ ಕೂಡಿದ ಗೀತಾಶಾಸ್ತ್ರದಲ್ಲಿ ಪರಸ್ಪರ ವಿರೋಧಗಳೇ ತೋರಿ ಭ್ರಾಂತಿ ಯುಂಟಾಗುವುದು. ಅನೇಕ ಮಂದಿ ವ್ಯಾಖ್ಯಾತೃಗಳು ಈ ಪ್ರಕಾರ ಭ್ರಾಂತರಾಗಿ ಗೀತಾಚಾರ್ಯನ ಮುಖ್ಯತಾತ್ಪರ್ಯವೇ ತಿಳಿಯದೆ ಸ್ವಕಪೋಲ ಕಲ್ಪಿತವಾದ ಉಲ್ಲೇಖನಗಳನ್ನು ಮಾಡಿ ಪರಸ್ಪರ ವಿವಾದ ಗ್ರಸ್ತರಾಗಿರುವುದರಿಂದ ಇವರಿಗೆ ಶ್ರೀ ಭಗವನ್ಮತದ ತತ್ವವೇ ತಿಳಿಯ ಲಿಲ್ಲವೆಂದು ಉದ್ಘೋಷಿಸಬಹುದಾಗಿದೆ.

ಶ್ರೀ ಭಗವನ್ಮತವನ್ನು ಯಥಾವತ್ತಾಗಿ ಬೋಧಿಸಲು ಈಗ ಶ್ರೀ ಕಲ್ಕಿರೂಪಿಯಾದ ಗೀತಾಚಾರ್ಯನೇ ಶಕ್ತನೇ ಹೊರತು ಇತರರು ಶಕ್ತರಲ್ಲವೆಂದು ನಿರ್ಮತ್ಸರರಾದ ಆಸ್ತಿಕರೆಲ್ಲರೂ ಅಂಗೀಕರಿಸುವರಷ್ಟೆ. ಶ್ರೀ ಕಲ್ಕಿಸಿಂಹನ ಮುಖ್ಯತಾತ್ಪರ್ಯವು ಪ್ರಪತ್ತಿಯೋಗವೇ ಎಂದು

ಸುವ್ಯಕ್ತವಾಗಿದೆ. ಆದಿಯಲ್ಲಿ ತಾನು ಪ್ರಾಜ್ಞನೆಂದು ಅಹಂಕಾರ ಗ್ರಸ್ತನಾಗಿದ್ದ ಅರ್ಜುನನನ್ನು ಕುರಿತು ಉಪದೇಶವು ಯಾವ ಪ್ರಕಾರ ವಾಗಿರಬೇಕು? ಪರಿಶೀಲಿಸಿ ನೋಡಿರಿ,–"ನಿನಗೆ ಏನೂ ತಿಳಿಯದು. ನೀನು ಪ್ರಾಜ್ಞನೆಂದು ಅಹಂಕಾರ ಗ್ರಸ್ತನಾಗಿರುತ್ತೀಯೆ, ನೀನು ಅಚಿತ್ತಿನಂತೆ ನನಗೆ ಸುತರಾಂ ಪರತಂತ್ರನಾಗಿರಬೇಕು. ನಿನ್ನ ಚೈತನ್ಯ ಶಕ್ತಿಯನ್ನು ನನ್ನ ಸಂಕಲ್ಪಕ್ಕೆ ವಿರುದ್ಧವಾಗಿ ಮಾಡಿ ನೀನು ಯುದ್ಧಮಾಡುವುದಿಲ್ಲವೆಂದು ಹೇಳಿದರೆ ನೀನೇ ದಂಡ್ಯನಾಗುತ್ತೀಯೆ"—ಎಂದು ಶ್ರೀಕೃಷ್ಣನು ತನ್ನ ಅಭಿಪ್ರಾಯವನ್ನು ವ್ಯಕ್ತವಾಗಿ ಉಪದೇಶಿಸಿದುದರಿಂದ, ಅರ್ಜುನನು ಕೊನೆಯಲ್ಲಿ—"ಕರಿಷ್ಯೇ ವಚನಂ ತವ" ಎಂದು ಒಪ್ಪಿ ತಾನು ಅಚಿದ್ವತ್ ಪರತಂತ್ರನಾಗಿ ಯುದ್ಧಕ್ಕೆ ಸನ್ನದ್ಧನಾದನು. ಇದೇ ಪರಮತಾತ್ಪರ್ಯವೆಂದು ಎಲ್ಲರೂ ಅಂಗೀಕರಿಸಬೇಕು. ಇದೇ ಪ್ರಪತ್ತಿಶಾಸ್ತ್ರದ ಪರಮ ರಹಸ್ಯವು. ಆತ್ಮಸಮರ್ಪಣರೂಪವಾದ ಪ್ರಪತ್ತಿಯೋಗದಲ್ಲಿ ಅಚಿದ್ವತ್ ಪಾರತಂತ್ರ್ಯವೇ ಚೇತನನಿಗೆ ಸ್ವರೂಪಾನುರೂಪವು. ಗೋಪೀಶಠಾರಿ ಗೋದಾಪ್ರಭೃತಿಗಳ ಅನುಷ್ಠಾನದಲ್ಲಿ ಇದು ಸ್ಪಷ್ಟವಾಗಿ ಕಾಣುತ್ತಿದೆಯಷ್ಟೆ—ಇವರೆಲ್ಲರೂ ಶ್ರೀ ಭಗವಂತನಿಗೆ ಯಥೇಷ್ಟ ವಿನಿಯೋಗಾರ್ಹರಾದರು. ಅರ್ಜುನನೂ ಕೂಡ ಶ್ರೀ ಕೃಷ್ಣನಿಗೆ ಇವರಂತೆಯೇ ಯಥೇಷ್ಟವಿನಿಯೋಗಾರ್ಹನಾಗಬೇಕು. ಒಂದು ಆಯುಧದಂತೆ ಅವನಿಗೆ ಇಷ್ಟವಿನಿಯೋಗಾರ್ಹವಾಗಬೇಕೇ ಹೊರತು ಸ್ವತಂತ್ರವಾದ ಚೈತನ್ಯ ಶಕ್ತಿಯನ್ನು ತೋರಿಸಕೂಡದು. ಆದುದರಿಂದಲೇ ಶ್ರೀ ಕೃಷ್ಣನು ಅರ್ಜುನನನ್ನು ಕುರಿತು "ಮಯ್ಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿ೯" ಎಂದು ಹೇಳಿ, ತನ್ನ ಸಂಕಲ್ಪದಿಂದಲೇ ಕೌರವರನ್ನು ತಾನೇ ಕೊಂದು (ನಿರ್ವೀರ್ಯರನ್ನಾಗಿ ಮಾಡಿ) ಅರ್ಜುನನನ್ನು ನಿಮಿತ್ತಮಾತ್ರವಾಗಿ ಮಾಡಿ, ಪಾಂಡವರಿಗೆ ಜಯವುಂಟಾಗುವಂತೆ ಅನುಗ್ರಹಿಸಿ, ಅವರಿಗೆ ಕೀರ್ತಿಬರುವಂತೆ ಮಾಡಿದನು. ಹೀಗೆಯೇ ಸಕಲ ಚೇತನರೂ ಶ್ರೀ

ಭಗವಂತನಲ್ಲಿ ನ್ಯಸ್ತಭರರಾಗಿ ಅಚಿದ್ವತ್ಪರತಂತ್ರರಾಗಿ ಅವನಿಗೆ ಯಥೇಷ್ಟವಿನಿಯೋಗಾರ್ಹರಾಗಿ ಸಕಲೇಷ್ಟಾರ್ಥಸಿದ್ಧಿಯಂ ಪಡೆಯಬೇಕೆಂಬುದೇ ಗೀತಾಶಾಸ್ತ್ರದ ಪರಮೋತ್ಕೃಷ್ಟವಾದ ರಹಸ್ಯಾರ್ಥವು.

---

ಶ್ರೀಃ

೩ನೆಯ ಪ್ರಕರಣ

## ಚರಮಶ್ಲೋಕ ಪಾರಮ್ಯ (ಪ್ರಪತ್ತಿಯೋಗ ಪ್ರಾಶಸ್ತ್ಯ)

ಚರಮಶ್ಲೋಕ ಏವಾಸ್ತಿ ಗೀತಾಶಾಸ್ತ್ರಸ್ಯ ಸಂಗ್ರಹಃ ।
ರಹಸ್ಯ ತ್ರಯಸಾರಜ್ಞಾಃ ಶ್ಲೋಕ ಮೇನಂ ವಿದುಃ ಪರಮ್ ॥

ಗೀತಾಶಾಸ್ತ್ರದ ಸಾರಾರ್ಥವೆಲ್ಲಾ ಚರಮಶ್ಲೋಕರೂಪವಾಗಿದೆ. ರಹಸ್ಯ ತ್ರಯಸಾರಜ್ಞರೇ ಈ ಶ್ಲೋಕದ ಪಾರಮ್ಯವನ್ನು ತಿಳಿದವರು ಅನೇಕ ಮಂದಿ ಗೀತಾಶಾಸ್ತ್ರಕ್ಕೆ ವ್ಯಾಖ್ಯಾನಗಳನ್ನು ಮಾಡಿರುತ್ತಾರೆ. ಈ ಚರಮ ಶ್ಲೋಕದ ಪಾರಮ್ಯವನ್ನು ತಿಳಿದು ವ್ಯಾಖ್ಯಾನ ಮಾಡಿದವರೇ ತತ್ತ್ವಜ್ಞರು, ಇತರರು ಅಲ್ಪಜ್ಞರು. ವಿಶಿಷ್ಟಾದ್ವೈತ ಸಿದ್ಧಾಂತ ಪ್ರವರ್ತಕಾಚಾರ್ಯರು ಪ್ರಾಯೇಣ ಎಲ್ಲರೂ ರಹಸ್ಯತ್ರಯವನ್ನು ಪ್ರಮಾಣವಾಗಿ ಅಂಗೀಕರಿಸಿರುತ್ತಾರೆ. ರಹಸ್ಯತ್ರಯವೆಂದರೆ—(೧) ಅಷ್ಟಾಕ್ಷರೀ ಎಂಬ ತಿರುಮಂತ್ರ. (೨) ದ್ವಯಮಂತ್ರ (೩) ಚರಮಶ್ಲೋಕ. ಈ ರಹಸ್ಯತ್ರಯದಲ್ಲಿ ತಿರುಮಂತ್ರಕ್ಕೆ ವಿವರಣವು ದ್ವಯಮಂತ್ರವೆಂತಲೂ, ದ್ವಯಮಂತ್ರಕ್ಕೆ ವಿವರಣವು ಚರಮಶ್ಲೋಕವೆಂತಲೂ ಪೂರ್ವಾಚಾರ್ಯರು ವರ್ಣಿಸಿರುತ್ತಾರೆ. ಈ ರಹಸ್ಯತ್ರಯದಲ್ಲಿ ದ್ವಯಮಂತ್ರವೇ ಪ್ರಧಾನವಾದ ದರಿಂದ—

ಈ ದ್ವಯಮಂತ್ರವೇ ಅನವರತ ಜಪ್ತವ್ಯವೆಂದು ನಿರ್ಣೀತವಾಗಿದೆ. ಶ್ರೀರಾಮನುಜಾಚಾರ್ಯರಿಂದ ವಿರಚಿತವಾದ ಗದ್ಯತ್ರಯದಲ್ಲಿ ಶ್ರೀ ಭಗವಂತನ ಆಜ್ಞಾರೂಪವಾದ ವಚನಗಳಲ್ಲಿ—

"ದ್ವಯಮರ್ಥಾನು ಸನ್ಧಾನೇನ ಸಹ ಸದೈವಂ ವಕ್ತಾ ಯಾ
ವಚ್ಛರೀರ ಪಾತಮತ್ರೈವ ಶ್ರೀರಂಗೇ ಸುಖಮಾಸ್ವ ॥"

ಎಂಬೀ ವಚನವು ಸುವ್ಯಕ್ತವಾಗಿದೆ. ಇದರ ತಾತ್ಪರ್ಯ:—"ದ್ವಯ ಮಂತ್ರವನ್ನೇ ಅದರ ಅರ್ಥವನ್ನು ತಿಳಿದು ಅನವರತ ಜಪಮಾಡುತ್ತ ನೀನು ನಿನ್ನ ಶರೀರವು ಇರುವವರೆಗೂ ಈ ಶ್ರೀರಂಗದಲ್ಲೇ ಸುಖವಾಗಿ ವಾಸಮಾಡು". ಗದ್ಯತ್ರಯವೂ ಪ್ರಪತ್ತಿಯೋಗವನ್ನೇ ಪ್ರತಿಪಾದಿಸುತ್ತದೆ. ಈ ದ್ವಯಮಂತ್ರವೂ ಸುವ್ಯಕ್ತವಾಗಿ ಪ್ರಪತ್ತಿಯೋಗವನ್ನೇ ಪ್ರತಿಪಾದಿಸುತ್ತದೆ. ಆದುದರಿಂದ ರಹಸ್ಯತ್ರಯದಲ್ಲಿ ಪ್ರಧಾನವಾದ ಈ ದ್ವಯಮಂತ್ರಕ್ಕೆ ವಿವರಣವಾದ ಚರಮಶ್ಲೋಕವೂ ಪ್ರಪತ್ತಿಯೋಗಪರವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

## (ಕೆಲವರ ಮತ)

ಆದರೂ ಶ್ರೀಯಾಮುನಾಚಾರ್ಯರಿಂದ ವಿರಚಿತವಾದ ಗೀತಾರ್ಥ ಸಂಗ್ರಹದಲ್ಲೇ ಆಗಲಿ, ಶ್ರೀರಾಮಾನುಜಾಚಾರ್ಯರಿಂದ ವಿರಚಿತವಾದ ಗೀತಾಭಾಷ್ಯದಲ್ಲೇ ಆಗಲಿ ಶ್ರೀಭಾಷ್ಯದಲ್ಲೇ ಆಗಲಿ—ಪ್ರಪತ್ತಿಯೋಗವೆಂಬ ವಚನವೇ ಎಲ್ಲಿಯೂ ವ್ಯಕ್ತವಾಗಿಲ್ಲ. ಶ್ರೀ ಭಾಷ್ಯದ ಆರಂಭ ಶ್ಲೋಕದಲ್ಲಿ—"ಶ್ರೀಮುಷೀ ಭಕ್ತಿರೂಪಾ" ಎಂದು ವ್ಯಕ್ತವಾಗಿದೆ. ಶ್ರೀರಾಮಾನುಜ ಗೀತಾಭಾಷ್ಯದ ಆರಂಭದಲ್ಲಿ—"ಪಾಂಡುತನಯ ಯುದ್ಧಪ್ರೋತ್ಸಾಹನವ್ಯಾಜೇನ ಪರಮಪುರುಷಾರ್ಥಲಕ್ಷಣ ಮೋಕ್ಷ ಸಾಧನತಯಾ ವೇದಾಂತೋದಿತಂ ಸ್ವವಿಷಯಂ ಜ್ಞಾನ ಕರ್ಮಾನುಗೃಹೀತಂ ಭಕ್ತಿಯೋಗಮವತಾರಯಾಮಾಸ ॥"—ಎಂದು ಭಕ್ತಿಯೋಗಪರವಾಗಿಯೇ ವ್ಯಾಖ್ಯಾನಮಾಡಲ್ಪಟ್ಟಿದೆ. ಕೊನೆ

ಯಲ್ಲಿಯೂ ಚರಮಶ್ಲೋಕದ ವ್ಯಾಖ್ಯಾನದಲ್ಲಿ ದ್ವಿತೀಯ ಯೋಜನೆಯಲ್ಲಿ—"ಸರ್ವಧರ್ಮಾಃಪರಿತ್ಯಜ್ಯ ಭಕ್ತಿಯೋಗಾರಂಭ ಸಿದ್ಧಯೇ ಮಾಮೇಕಂ ಪರಮಕಾರುಣಿಕಮನಾಲೋಚಿತ ವಿಶೇಷಾಶೇಷ ಲೋಕ ಶರಣ್ಯಮಾಶ್ರಿತವಾತ್ಸಲ್ಯಜಲಧಿಂ ಶರಣಂ ಪ್ರಪದ್ಯಸ್ವ। ಅಹಂತ್ವಾ ಸರ್ವಪಾಪೇಭ್ಯೋ ಯಥೋದಿತಸ್ವರೂಪಭಕ್ತ್ಯಾರಂಭವಿರೋಧಿಭ್ಯಸ್ಸರ್ವೇಭ್ಯಃ ಪಾಪೇಭ್ಯೋ ಮೋಕ್ಷಯಿಷ್ಯಾಮಿ, ಮಾಶುಚಃ॥" —ಎಂದು ಭಕ್ತಿಯೋಗಪರವಾಗಿಯೇ ವ್ಯಾಖ್ಯಾನವು ಕಾಣುವುದರಿಂದ ಶ್ರೀರಾಮಾನುಜಸಿದ್ಧಾಂತ ರೀತ್ಯಾ ಶ್ರೀ ಭಾಷ್ಯದಲ್ಲೇ ಆಗಲಿ ಗೀತಾಶಾಸ್ತ್ರದಲ್ಲೇ ಆಗಲಿ ಪ್ರಪತ್ತಿಯೋಗವು ಕಾಣುವುದೇ ಇಲ್ಲವೆಂದು ಕೆಲವರು ಹೇಳುವರು.

(ನಮ್ಮ ಮತ)

ಆದರೂ ಶ್ರೀ ಯಾಮುನಾಚಾರ್ಯರಿಗೂ ಶ್ರೀ ರಾಮಾನುಜಾಚಾರ್ಯರಿಗೂ ಪ್ರಪತ್ತಿಯೋಗವು ಅನಭಿಮತವೆಂದು ಯಾವ ಆಸ್ತಿಕರೂ ಹೇಳಲಾರರು. ಪರಮತನಿರಸನಕ್ಕಾಗಿ ಪ್ರವೃತ್ತವಾದ ಪ್ರಬನ್ಧಗಳಲ್ಲಿ ಉಭಯಪಕ್ಷ ಸಂಪ್ರತಿಪನ್ನವಾದ ಪ್ರಮಾಣಗಳನ್ನೇ ಅಂಗೀಕರಿಸಿ ವಾದಿಸಬೇಕಾಗಿರುವುದರಿಂದ ಸ್ವಗೋಷ್ಠೀನಿಷ್ಠವಾದ ಪ್ರಪತ್ತಿಯೋಗವೆಂಬ ಸಂಪ್ರದಾಯಾರ್ಥವನ್ನು ಇಲ್ಲಿ ವ್ಯಕ್ತಪಡಿಸದೆ ಈ ಆಚಾರ್ಯವರ್ಯರಿಬ್ಬರೂ ಇದನ್ನು ಪರಮರಹಸ್ಯವೆಂದು ತಿಳಿದು, ಇತರರಿಗೆ ಹೇಳಬೇಕಾದ ಭಕ್ತಿಯೋಗ ವಿಚಾರವನ್ನೇ ಇಲ್ಲಿ ವ್ಯಕ್ತಪಡಿಸಿದರೆಂದು ಹೇಳಬೇಕಾಗಿದೆ. ಮತ್ತೂ ಈ ಆಚಾರ್ಯರಿಗೂ ಭಕ್ತಿಯೋಗವು ದ್ವಿವಿಧವೆಂದು ತಾತ್ಪರ್ಯ. ಸಾಧನಭಕ್ತಿಯೆಂದೂ ಫಲಭಕ್ತಿಯೆಂದೂ, ಎರಡು ಪ್ರಕಾರವಾದ ಭಕ್ತಿಯೋಗದಲ್ಲಿ—ಸಾಧನ ಭಕ್ತಿಯು ಉಪಾಸಕನಿಗೆ ಸೇರಿದುದೆಂತಲೂ ಅತ್ಯಂತ ಕ್ಲೇಶಸಾಧ್ಯವೆಂತಲೂ, ಫಲಭಕ್ತಿಯು ಪ್ರಪನ್ನನಿಗೆ ಸೇರಿದುದೆಂತಲೂ ವಿಶ್ವಾಸಬಾಹುಳ್ಯದಿಂದ ಅತ್ಯಂತಸುಲಭಸಾಧ್ಯವೆಂತಲೂ ಪೂರ್ವಾ

ಚಾರ್ಯರಿಂದಲೇ ನಿರ್ಣೀತವಾಗಿರುವುದರಿಂದ—ಫಲಭಕ್ತಿಗೂ ಪ್ರಪ ತ್ತಿಗೂ ತಾರತಮ್ಯವೇ ವಿಶೇಷವಾಗಿ ಕಂಡುಬರುವುದಿಲ್ಲ. ಪ್ರಪನ್ನ ನಿಗೂ ಫಲಭಕ್ತಿಯು ಅತ್ಯುತ್ಕಟವಾದ ಭಗವತ್ಪ್ರೀತಿರೂಪವಾಗಿ ಉಪಾದೇಯವಾಗಿಯೇ ಇದೆ. ಗೋಪೀಜನ-ಶಠಾರಿ-ಕಲಿಜಿ-ತ್ಪ್ರಭೃತಿಗಳ ಅನುಷ್ಠಾನದಲ್ಲಿ ಇದು ವ್ಯಕ್ತವಾಗಿಯೇ ಇದೆ. ಆದುದ ರಿಂದ—ಗದ್ಯತ್ರಯದಲ್ಲಿ ಪ್ರತಿಪಾದಿತವಾದ ಪ್ರಪತ್ತಿಯೋಗಕ್ಕೆ ಫಲಭಕ್ತಿಯೋಗವು ಅನುಕೂಲತಮವಾದುದೇ ಹೊರತು ವಿರುದ್ಧ ವಾದುದಲ್ಲ. ಪ್ರಪತ್ತಿಯೋಗಕ್ಕೆ ಕರ್ಮ-ಜ್ಞಾನ-ಭಕ್ತಿಯೋಗ ಗಳೆಲ್ಲವೂ ಅಂಗಭೂತವಾಗಿಯೇ ಇರುವುವು. ಕೇವಲ ಕರ್ಮಯೋಗ ಕೇವಲ ಜ್ಞಾನಯೋಗ ಕೇವಲ ಭಕ್ತಿಯೋಗವೆಂಬ ನಾನಾ ವಿಧಾನು ಷ್ಠಾನಗಳು ಪ್ರಪನ್ನನಿಗೆ ಅಭಿಮತವಾಗಲಾರವು. ಪ್ರಪನ್ನನಿಗೆ ಕರ್ಮವು-ಭಗವತ್ಕೈಂಕರ್ಯರೂಪವಾಗಿಯೂ, ಜ್ಞಾನವು-ಭಗವನ್ಮಾ ಹಾತ್ಮ್ಯಜ್ಞಾನರೂಪವಾಗಿಯೂ, ಭಕ್ತಿಯು-ಭಗವಂತನಲ್ಲೇ ಉತ್ಕಟ ಪ್ರೀತಿರೂಪವಾಗಿಯೂ ಇರುವುದರಿಂದ ಅವುಗಳು ತನ್ನ ಪ್ರಪತ್ತಿ ಯೋಗದ ಅನುಷ್ಠಾನಕ್ಕೆ ಅತ್ಯಂತ ಸಹಕಾರಿಯಾಗಿಯೇ ಇರುವುವು. ಈ ಪರಮಾರ್ಥರೂಪವಾದ ಸಂಪ್ರದಾಯ ರಹಸ್ಯವನ್ನು ಶ್ರೀ ಯಾಮುನಾಚಾರ್ಯರೂ ಶ್ರೀ ರಾಮಾನುಜಾಚಾರ್ಯರೂ ಸ್ತೋತ್ರರತ್ನ-ಗದ್ಯತ್ರಯಾದಿ ಪ್ರಬಂಧಗಳಲ್ಲಿ ಸ್ವಗೋಷ್ಠೀನಿಷ್ಠರಿಗಾಗಿ ಪ್ರಕಾಶ ಪಡಿಸಿಯೇ ಇರುತ್ತಾರೆ. ಆದುದರಿಂದ ಪ್ರಪತ್ತಿಯೋಗವು ಇವರಿಗೆ ಅಂತರಂಗಪ್ರಿಯವಾದುದೆಂದು ಸುವ್ಯಕ್ತವಾಗಿದೆ. ಮತ್ತು ಗೀತಾ ಭಾಷ್ಯದಲ್ಲಿ ಚರಮಶ್ಲೋಕ ವ್ಯಾಖ್ಯಾನದಲ್ಲಿ—ಪ್ರಥಮಯೋಜನೆಯು ತ್ಯಾಗಪರವಾಗಿರುವುದರಿಂದ ಇದು ಪ್ರಪತ್ತಿಯೋಗಕ್ಕೆ ಅನುಕೂಲ ವಾಗಿಯೇ ಇದೆಯೆಂದೂ ಸುವ್ಯಕ್ತವಾಗಿಯೇ ಇದೆ. ಶ್ರೀ ಯಾಮುನಾಚಾರ್ಯರ ಗೀತಾರ್ಥ ಸಂಗ್ರಹದ ಕೊನೆಯಲ್ಲೂ ಭರ ನ್ಯಾಸವೆಂಬ ಪ್ರಪತ್ತಿಯೇ ಸೂಚಿತವಾಗಿದೆ—

" ನಿಜಕರ್ಮಾದಿ ಭಕ್ತ್ಯಂತಂ ಕುರ್ಯಾತ್ ಪ್ರೀತ್ಯೈವ ಕಾರಿತಃ ।
ಉಪಾಯತಾಂ ಪರಿತ್ಯಜ್ಯ ನ್ಯಸೇದ್ದೇವೇ ತು ತಾಮಭೀಃ ॥ "

ಮತ್ತು-ಗೀತಾಭಾಷ್ಯದಲ್ಲಿ-ಶ್ರೀ ರಾಮಾನುಜಾಚಾರ್ಯರಿಂದಲೇ ಚತುರ್ದಶಾಧ್ಯಾಯದ ಕೊನೆಯ ಶ್ಲೋಕದ (" ಬ್ರಹ್ಮಣೋ ಹಿ ಪ್ರತಿಷ್ಠಾऽಹಂ "—ಇತ್ಯಾದಿ ಶ್ಲೋಕದ) ವ್ಯಾಖ್ಯಾನದಲ್ಲಿ—"ಮಾಮೇವ ಯೇ ಪ್ರಪದ್ಯಂತಇತ್ಯಾರಭ್ಯ ಗುಣಾತ್ಯಯಸ್ಯ ತತ್ಪೂರ್ವಕಾಕ್ಷರೈಶ್ವರ್ಯ ಭಗವತ್ಪ್ರಾಪ್ತೀನಾಂಚ ಭಗವತ್ಪ್ರಪತ್ತ್ಯೇಕೋಪಾಯತಾಯಾಃ ಪ್ರತಿಪಾದಿತತ್ವಾದೇಕಾಂತ ಭಗವತ್ಪ್ರಪತ್ತ್ಯೇಕೋಪಾಯೋ ಗುಣಾತ್ಯಯಸ್ತತ್ಪೂರ್ವಕ ಬ್ರಹ್ಮಭಾವಶ್ಚೇತಿ॥ "—ಎಂದು ಪ್ರಪತ್ತಿಯೋಗಕ್ಕೆ ಗುಣಾತ್ಯಯಾದಿಗಳು ಸಾಧನಗಳೆಂದು ಸುವ್ಯಕ್ತವಾಗಿ ನಿರೂಪಿಸಲ್ಪಟ್ಟವೆ.

ಆದುದರಿಂದ—ಪ್ರಪತ್ತಿಯೋಗವು ಗೀತಾಶಾಸ್ತ್ರದಲ್ಲಿ ಪ್ರತಿಪಾದಿತವಾಗಿದೆಯೆಂಬುದೇ ಸಿದ್ಧಾಂತಿತವಾಗಿದೆ. ಈ ಪ್ರಪತ್ತಿಯೋಗಕ್ಕೆ ಕರ್ಮ-ಜ್ಞಾನ-ಭಕ್ತಿಯೋಗಗಳು ಅಂಗಭೂತವಾಗಿವೆಯೆಂದೂ ಪ್ರಮಾಣಸಿದ್ಧವಾಗಿವೆ.

---

ಶ್ರೀ

## ೪ನೆಯ ಪ್ರಕರಣ

## ಚರಮಶ್ಲೋಕ ತಾತ್ಪರ್ಯ (ಸಿದ್ಧೋಪಾಯಸ್ವರೂಪ)

ಗೀತಾಶಾಸ್ತ್ರದ ೧೮ನೆಯ ಅಧ್ಯಾಯದಲ್ಲಿ ೬೬ನೆಯ ಶ್ಲೋಕ ವಾದ:—

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥"

ಎಂಬೀ ಶ್ಲೋಕವೇ ಚರಮಶ್ಲೋಕವೆಂದು ಕರೆಯಲ್ಪಡುತ್ತದೆ. ಚರಮಾಧ್ಯಾಯದಲ್ಲಿ ಮುಖ್ಯತಮವಾದ ರಹಸ್ಯವನ್ನು ತಿಳಿಸುವ ಶ್ಲೋಕವಾದುದರಿಂದ ಇದಕ್ಕೆ ಚರಮಶ್ಲೋಕವೆಂದು ಹೆಸರಾಯಿತು. ಇದು ಕರ್ಮ-ಜ್ಞಾನ-ಭಕ್ತಿ-ಪ್ರಪತ್ತಿ—ಎಂಬ ಸಾಧನಗಳಲ್ಲಿ ಮುಖ್ಯತಮವಾಗಿರುವ ಕೊನೇದಾದ ಪ್ರಪತ್ತಿಯೆಂಬ ಉಪಾಯವನ್ನು ವಿವರಿಸುವುದರಿಂದ ಚರಮಶ್ಲೋಕವೆಂದು ಕರೆಯಲ್ಪಡುತ್ತದೆಯೆಂತಲೂ ಕೆಲವರು ಅಂಗೀಕರಿಸುವರು.

ಕರ್ಮ-ಜ್ಞಾನ-ಭಕ್ತಿ-ಪ್ರಪತ್ತಿ—ಎಂಬ ಈ ನಾಲ್ಕು ಸಾಧನಗಳೇ ಅಲ್ಲದೆ ಆಚಾರ್ಯಾಭಿಮಾನ—ಎಂಬ ಮತ್ತೊಂದು ಉಪಾಯವು ಉಂಟೆಂದು ಅಂಗೀಕರಿಸಿ ಅದನ್ನೇ ಚರಮೋಪಾಯವೆಂದು ಕೆಲವು ಮಂದಿ ಆಚಾರ್ಯರು ಪ್ರಕಾಶಪಡಿಸಿರುತ್ತಾರೆ. ಈ ೫ ಉಪಾಯಗಳಿಗೂ ಸಾಕ್ಷಾತ್ತಾಗಿ ಉಪಾಯತ್ವವೇ ಇಲ್ಲವೆಂತಲೂ ಶ್ರೀಮನ್ನಾರಾಯಣನಾದ ಈಶ್ವರನೇ ಉಪಾಯವೆಂತಲೂ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ನಿರ್ಣಯಿಸಿರುವುದರಿಂದ ಶ್ರೀಮನ್ನಾರಾಯಣನೇ

(ನಿತ್ಯಸಿದ್ಧನಾದ ಪರಮಾತ್ಮನಾದುದರಿಂದ) ಸಿದ್ಧೋಪಾಯಭೂತನೆಂದು ಕರೆಯಲ್ಪಡುತ್ತಾನೆ. ತಾನೇ ಉಪೇಯಭೂತನಾಗಿಯೂ ನಿಂತು ಸಕಲ ಚೇತನರಿಗೂ ಉಜ್ಜೀವನವನ್ನು ಉಂಟುಮಾಡುತ್ತಿರುವುದರಿಂದ ಈಶ್ವರನೇ ಸಿದ್ಧೋಪಾಯವಾಗಿರುತ್ತಾನೆಂತಲೂ, ಚೇತನರಿಗೆ ಕರ್ಮ-ಜ್ಞಾನ-ಭಕ್ತಿ-ಪ್ರಪತ್ತಿ-ಆಚಾರ್ಯಾಭಿಮಾನ—ಎಂಬಿವುಗಳು ಅವನ ಸಿದ್ಧೋಪಾಯತ್ವ ಪ್ರಕಾಶಕ್ಕೆ ಸಹಕಾರಿಗಳಾಗುತ್ತವೆಯೆಂತಲೂ ಅಂಗೀಕರಿಸಿ ಅವನ ಸಂಮಂಧದಿಂದಲೇ ಇವುಗಳಿಗೂ ಸಾಧನತ್ವವುಂಟೆಂದು ನಿರ್ಣಯಿಸಿ ಸಾಮಾನ್ಯವಾಗಿ ಲೋಕದಲ್ಲಿ ಜನರಿಗೆ ಬೋಧಿಸುವುದಕ್ಕಾಗಿ ಶಾಸ್ತ್ರದಲ್ಲಿ ಇವುಗಳಿಗೆ ಸಾಧನತ್ವವು ಹೇಳಲ್ಪಟ್ಟಿದೆ. ಅದು ಹೇಗೆಂದರೆ—

(೧) ಕರ್ಮ=ಪರಮಾತ್ಮನ ಕೈಂಕರ್ಯ.

(೨) ಜ್ಞಾನ=ಪರಮಾತ್ಮಜ್ಞಾನ.

(೩) ಭಕ್ತಿ=ಪರಮಾತ್ಮನಲ್ಲಿ ಅತ್ಯುತ್ಕಟ ಪ್ರೀತಿ.

(೪) ಪ್ರಪತ್ತಿ=ಪರಮಾತ್ಮನಲ್ಲಿ ಆತ್ಮಸಮರ್ಪಣ. (=ಶರಣಾಗತಿ)

(೫) ಆಚಾರ್ಯಾಭಿಮಾನ=ಪರಮಾತ್ಮನನ್ನೇ ಪ್ರಥಮಾಚಾರ್ಯನೆಂದು ಆಶ್ರಯಿಸೋಣ.

ಈ ಪ್ರಕಾರ ಕರ್ಮ-ಜ್ಞಾನ-ಭಕ್ತಿ-ಪ್ರಪತ್ತಿ-ಆಚಾರ್ಯಾಭಿಮಾನ—ಎಂಬಿವುಗಳನ್ನು ಪರಿಶೀಲಿಸಿ ತಿಳದುಕೊಳ್ಳದೆ ಬೇರೆವಿಧವಾಗಿ ಯಾರಾದರು ಭಾವಿಸಿದರೆ ಪರಮಾತ್ಮನ ಸಿದ್ಧೋಪಾಯತ್ವವನ್ನು ಅವರು ತಿಳಿಯಲಾರರು.

ಚರಮಶ್ಲೋಕದ ಮುಖ್ಯತಾತ್ಪರ್ಯವು ಪರಮಾತ್ಮನ ಸಿದ್ಧೋಪಾಯತ್ವ ಪ್ರಕಾಶಕವೆಂದು ನಾವು ಈಗ ಸಕಲಲೋಕಗಳಿಗೂ ಘೋಷಿಸಿ ಹೇಳಬೇಕಾಗಿದೆ. ಅನೇಕರಿಗೆ ಈ ರಹಸ್ಯ ತತ್ತ್ವದ ಸಾರವು ಅದ್ಯಾಪಿ ತಿಳಿಯದೇ ಇರುವುದರಿಂದಲೂ, ವೇದಾಂತಿ

ಗಳಲ್ಲಿಯೂ ಅನೇಕರು ಈ ಶ್ಲೋಕಕ್ಕೆ ಅನ್ಯಥಾ ನಾನಾಪ್ರಕಾರ ಗಳಲ್ಲಿ ವ್ಯಾಖ್ಯಾನಮಾಡಿರುವುದರಿದಲೂ, ನಾವು ಈಗ ಈ ಪರಮ ರಹಸ್ಯಾರ್ಥವನ್ನು ವಿಶದೀಕರಿಸುವುದಕ್ಕಾಗಿ ಈ ಶ್ಲೋಕದ ತಾತ್ಪರ್ಯ ವನ್ನು ಸೂಚಿಸುತ್ತೇವೆ.

**"ಸರ್ವಧರ್ಮಾನ್ಪರಿತ್ಯಜ್ಯ"** — ಲೋಕದಲ್ಲಿ ಎಲ್ಲರೂ ಸಾಮಾನ್ಯವಾಗಿ ಮೋಕ್ಷಸಾಧನಗಳೆಂದು ಅಂಗೀಕರಿಸಿರುವ ಕರ್ಮ-ಜ್ಞಾನ-ಭಕ್ತಿ-ಪ್ರಪತ್ತಿ-ಆಚಾರ್ಯಾಭಿಮಾನ-ಇತ್ಯಾದಿಗಳನ್ನು ಸಾಧನ ಗಳಲ್ಲವೆಂದು ನಿರ್ಣಯಿಸಿ, ಅವುಗಳಲ್ಲಿ ಸಾಧನಬುದ್ಧಿಯನ್ನು ಸುತ ರಾಂ ತ್ಯಜಿಸಿ ;

**"ಮಾಮೇಕಂ ಶರಣಂ ವ್ರಜ"**—ಪರಮಾತ್ಮನಾದ ನನ್ನನ್ನು ಒಬ್ಬನನ್ನೇ ಉಪಾಯವೆಂದು ತಿಳಿದು, ಸಿದ್ಧೋಪಾಯ ಸ್ವರೂಪಿಯಾದ ನನ್ನನ್ನೇ ಆಶ್ರಯಿಸು. [ಇಂತಹ ಆಶ್ರಯಣವೇ ಶರಣಾಗತಿಯೆಂತಲೂ, ಪ್ರಪತ್ತಿಯೆಂತಲೂ ಕರೆಯಲ್ಪಡುತ್ತದೆ. ಈ ಪ್ರಪತ್ತಿಗೂ ಉಪಾಯತ್ವವಿಲ್ಲ—"ಪ್ರಪತ್ತಿರಪಿಸೋಪಧಿಃ". ನಾನೇ ಉಪಾಯಭೂತನು.]

**"ಅಹಂತ್ವಾಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ"**—ಸಿದ್ಧೋಪಾಯಭೂತನಾದ ನಾನೇ ನಿನ್ನ ಸರ್ವವಿಧವಾದ ಪಾಪ ಗಳನ್ನೂ ಧ್ವಂಸಮಾಡಿ ನಿನಗೆ ಮೋಕ್ಷವಂ ಕೊಡುವೆನು.

**"ಮಾಶುಚಃ"**—ನೀನು ದುಃಖಿಸಬೇಡ. ಈ ಪ್ರಕಾರ ಶಬ್ದಾರ್ಥವನ್ನು ತಿಳಿದುಕೊಂಡರೆ—ಪರಮಾತ್ಮನಾದ ಶ್ರೀ ಕೃಷ್ಣನೇ ಗೀತಾಚಾರ್ಯನಾಗಿ ನಿಂತು ತನ್ನ ಸಿದ್ಧೋಪಾಯತ್ವವನ್ನು ಪ್ರಕಾಶ ಪಡಿಸಿ, ತಾನೇ ಉಪಾಯೋಪೇಯಭೂತನೆಂದು ಈ ಚರಮಶ್ಲೋಕ ದಲ್ಲಿ ಉದ್ಘೋಷಿಸಿ ತಾನೇ ಮೋಕ್ಷಪ್ರದನೆಂತಲೂ ವ್ಯಕ್ತಪಡಿಸಿರುವು ದರಿಂದ, ಈ ಗೀತಾಚಾರ್ಯನಾದ ಪರಮಾತ್ಮನನ್ನೇ ಸಕಲಚೇತನರೂ ಆಶ್ರಯಿಸಿ ಮುಕ್ತರಾಗಬೇಕೆಂಬ ಪರಮಾರ್ಥವು ವಿಶದವಾಗುತ್ತದೆ.

" ಅಹಂ-ಮೋಕ್ಷಯಿಷ್ಯಾಮಿ "-ಎಂದು ತಾನೇ ಮೋಕ್ಷಪ್ರದನೆಂದು ವ್ಯಕ್ತಪಡಿಸಿ ಇದ್ದಾಗ್ಯೂ ಕೆಲವರು ಸಾಧನಾಂತರಪರರಾಗಿಯೂ ಕೆಲವರು ಪ್ರಾಪ್ಯಾಂತರಪರರಾಗಿಯೂ ಪ್ರಣಷ್ಟರಾಗುತ್ತಿರುವುದು ಅತ್ಯಂತಶೋಚನೀಯವಾಗಿದೆ.

ಈ ಮೋಕ್ಷವೆಂಬ ಪರಮ ಪುರುಷಾರ್ಥವು ಪರಮಾತ್ಮಪ್ರಾಪ್ತಿರೂಪವಾದುದರಿಂದ, ಪರಮಾತ್ಮನ ಸಾನ್ನಿಧ್ಯದಲ್ಲಿ ತತ್ಸಙ್ಕಲ್ಪಾನುರೂಪವಾದ ನಿತ್ಯಕೈಂಕರ್ಯ ಸಾಮ್ರಾಜ್ಯವನ್ನು ಪಡೆದು ನಿತ್ಯನಿರತಿಶಯಾನಂದಾನುಭವವಂ ಮಾಡೋಣವೇ ಮೋಕ್ಷವೆಂದು ಸಿದ್ಧಾಂತಿತವಾಗಿದೆ. ಶ್ರೀಕೃಷ್ಣರೂಪಿಯಾದ ಪರಮಾತ್ಮನ ಸಂಕಲ್ಪಕ್ಕೆ ಅನುಗುಣವಾದ ಯುದ್ಧರೂಪವಾದ ಕೈಂಕರ್ಯವನ್ನು ಅರ್ಜುನನು ಮಾಡಿದುದರಿಂದ ಅರ್ಜುನನಿಗೂ ಮೋಕ್ಷಸಿದ್ಧಿಯುಂಟೆಂದು ಹೇಳಬೇಕು. ಮಹಾಭಾರತದಲ್ಲಿ ಅರ್ಜುನನಿಗೂ ನರಕಾನುಭವವಂ ಹೇಳಿ ಕ್ರಮೇಣ ವೀರಸ್ವರ್ಗಪ್ರಾಪ್ತಿಯನ್ನು ಹೇಳಿರುವುದು—" ಗಹನಾ ಕರ್ಮಣೋಗತಿಃ "—ಎಂಬ ಕರ್ಮಪ್ರಾಬಲ್ಯವನ್ನು ಸೂಚಿಸುವುದಕ್ಕೋಸ್ಕರವೇಯೆಂದು ವ್ಯಕ್ತವಾಗುತ್ತದೆ. ನರನಾರಾಯಣಾವತಾರದಲ್ಲಿ, ನಾರಾಯಣನು ನರನಿಗೆ ಅಷ್ಟಾಕ್ಷರೀ ಮಂತ್ರೋಪದೇಶವಂ ಮಾಡಿದಂತೆಯೇ, ನಾರಾಯಣರೂಪಿಯಾದ ಶ್ರೀಕೃಷ್ಣನೇ ಆಚಾರ್ಯನಾಗಿ ನಿಂತು, ನರರೂಪಿಯಾದ ಅರ್ಜುನನಿಗೆ ಗೀತೋಪದೇಶವಂ ಮಾಡಿದುದರಿಂದ ಇಂತಹ ಭಾಗವತೋತ್ತಮನಾದ ಅರ್ಜುನನಿಗೇ ಮೋಕ್ಷಪ್ರಾಪ್ತಿಯು ಇಲ್ಲವೆಂದರೆ ಇತರರಿಗೆ ಹೇಗೆ ಮೋಕ್ಷಸಿದ್ಧಿಯೆಂಬ ಸಂಶಯವು ಉಂಟಾಗುವುದು. ಆದುದರಿಂದ ತತ್ಕಾಲದಲ್ಲಿ ವೀರಸ್ವರ್ಗಪ್ರಾಪ್ತಿಯಾದರೂ ಕ್ರಮೇಣ ಮೋಕ್ಷಸಿದ್ಧಿಯೇ ಆಯಿತೆಂದು —" ಸ್ವಂಧಾಮ ಪರಮಂ ಮಯಾ " ಎಂಬ ಶ್ರೀ ಕೃಷ್ಣಾವತಾರ ಪೂರ್ತಿ ಸೂಚಕವಾದ ವಚನದಿಂದಲೇ ಅಂಗೀಕರ್ತವ್ಯವಾಗಿದೆ ಶ್ರೀಕೃಷ್ಣನು ತನ್ನ ಪರಿವಾರದೊಡನೆಯೇ ಅವತರಿಸಿದುದರಿಂದ

ಪುನಃ ತನ್ನ ಪರಿವಾರದೊಡನೆಯೇ ಭಕ್ತವರ್ಗಸಮೇತನಾಗಿ ಪರಮ ಪದವನ್ನು ಸೇರಿದನೆಂದು ಆ ವಚನಕ್ಕೆ ತಾತ್ಪರ್ಯವನ್ನು ಎಲ್ಲರೂ ಸ್ವೀಕರಿಸಬೇಕಾಗಿದೆ. (ಆ ಪರಿವಾರದಲ್ಲಿ ಅರ್ಜುನನೂ ಅಂತ ರ್ಭೂತನಷ್ಟೆ.)

ಈ ಪ್ರಕಾರ ತಾತ್ಪರ್ಯನಿರ್ಣಯವೇ ಸಕಲಚೇತನರ ಉಜ್ಜೀವ ನಕ್ಕೆ ಅತ್ಯಾವಶ್ಯಕವಾಗಿರುವುದರಿಂದ ಈ ಪರಮೋತ್ಕೃಷ್ಟವಾದ ರಹಸ್ಯಾರ್ಥವನ್ನು ಶ್ರೀಕಲ್ಕಿ ನಾರಸಿಂಹಸ್ವರೂಪಿಯಾದ ಗೀತಾ ಚಾರ್ಯನೇ ಈಗ ವ್ಯಕ್ತಪಡಿಸಿರುತ್ತಾನೆ. ಎಲ್ಲರೂ ವಿಶ್ವಾಸಭರಿತರಾಗಿ ನನ್ನನ್ನೇ ಉಪಾಯೋಪೇಯಭೂತನೆಂದು ತಿಳಿದು ಆಶ್ರಯಿಸಿ ನನ್ನ ಸಂಕಲ್ಪಾನುಸಾರ ಕೈಂಕರ್ಯನಿಷ್ಠರಾಗಿ ಕೃತಾರ್ಥರಾಗಬೇಕು.

---

ಶ್ರೀ

## ೩ನೆಯ ಪ್ರಕರಣ

## ಗೀತಾಶಾಸ್ತ್ರದ ಸಾರಾಂಶ

ಈ ಪ್ರಕರಣದಲ್ಲಿ ಪ್ರತಿಯೊಂದು ಅಧ್ಯಾಯದ ಸಾರಾಂಶ ವನ್ನು ಸಂಕ್ಷೇಪವಾಗಿ ತಿಳಿಸಿ ಕ್ರಮೇಣ ಈ ಶಾಸ್ತ್ರದಲ್ಲಿ ಆಮೂಲಾಗ್ರ ವಾದ ಪರಮಾರ್ಥವನ್ನೂ ನಿರೂಪಿಸುವೆವು.

೧. **ಪ್ರಥಮಾಧ್ಯಾಯದ ಸಾರಾಂಶ**—(ಅರ್ಜುನ ವಿಷಾದ ಯೋಗ)—ಶ್ರೀಯಃಪತಿಯಾದ ಭಗವಂತನು ಶ್ರೀ ಕೃಷ್ಣರೂಪಿ ಯಾಗಿ ಅವತರಿಸಿ ಕುರುಕ್ಷೇತ್ರದಲ್ಲಿ ಪಾರ್ಥಸಾರಥಿಯಾಗಿ ಪಾಂಡವ ಸೈನ್ಯದೊಡನೆ ಯುದ್ಧರಂಗಕ್ಕೆ ಬಂದು ನಿಂತಿರುವಾಗ—ಯುದ್ಧರಂಗ

ದಲ್ಲಿ ಪಾಂಡವರಿಗೂ ಕೌರವರಿಗೂ ಪರಸ್ಪರ ಯುದ್ಧಕ್ರಮವು ಹೇಗೆ ನಡೆಯಿತೆಂದು ಧೃತರಾಷ್ಟ್ರನು ಸಂಜಯನನ್ನು ಕೇಳಲು, ಸಂಜಯನು* ಹೇಳುವ ಕ್ರಮವೆಂತೆಂದರೆ:—

ಪಾಂಡವ ಸೈನ್ಯವು ಯುದ್ಧಸನ್ನದ್ಧವಾಗಿ ನಿಂತಿರುವಾಗ ಅದನ್ನು ನೋಡಿ ನಿನ್ನ ಮಗನಾದ ದುರ್ಯೋಧನನು ದ್ರೋಣಾಚಾರ್ಯರ ಸಮೀಪಕ್ಕೆ ಬಂದು ಪಾಂಡವರ ಸೈನ್ಯದಲ್ಲಿ ಸೇರಿರುವ ಪ್ರಮುಖರ ನಾಮಧೇಯಗಳನ್ನೆಲ್ಲಾ ಹೇಳಿ, ತನ್ನ ಸೈನ್ಯದಲ್ಲಿ ಸನ್ನದ್ಧರಾಗಿರುವ ಶೂರರ ನಾಮಧೇಯಗಳನ್ನೂ ಹೇಳಿ, ಭೀಷ್ಮ ರಕ್ಷಿತವಾದ ತನ್ನ ಸೈನ್ಯಕ್ಕಿಂತ ಭೀಮರಕ್ಷಿತವಾದ ಪಾಂಡವಸೈನ್ಯವೇ ಬಲಿಷ್ಠವಾಗಿದೆಯೆಂದು ನಿರೂಪಿಸಿ, ಎಲ್ಲರೂ ಸರ್ವದಾ ಭೀಷ್ಮನನ್ನೇ ರಕ್ಷಿಸಬೇಕೆಂದು ತಿಳಿಸಿದನು.

ಆಗ ದ್ರೋಣಾಚಾರ್ಯನು ದುರ್ಯೋಧನನಿಗೆ ಹರ್ಷವುಂಟಾಗುವಂತೆ ಸಿಂಹನಾದವಂಮಾಡಿ ತನ್ನ ಪ್ರತಾಪಸೂಚಕವಾದ ಶಂಖಧ್ವಾನವನ್ನೂ ಮಾಡಿದನು—ಆಗ ಆ ಸೈನ್ಯದಲ್ಲಿ ಸರ್ವತ್ರ ಶಂಖ ಭೇರೀ ಪಣವಾನಕ ಗೋಮುಖಾದಿ ಮಹಾಶಬ್ದಗಳು ಒಟ್ಟಿಗೆ ತತ್‍ಕ್ಷಣದಲ್ಲಿಯೇ ಮೊಳಗಿದುವು. ಇದನ್ನು ಕೇಳಿ ಕೃಷ್ಣಾರ್ಜುನರಿಬ್ಬರೂ ತಮ್ಮ ತಮ್ಮ ಶಂಖಗಳನ್ನು ಊದಿ ಮಹಾಘೋಷವನ್ನು ಮಾಡಿದರು —ಶ್ರೀ ಕೃಷ್ಣನು ಪಾಂಚಜನ್ಯವನ್ನೂ ಅರ್ಜುನನು ದೇವದತ್ತವನ್ನೂ,

---

* ಸಂಜಯನಿಗೆ ಈ ಶ್ರೀ ಕೃಷ್ಣಾರ್ಜುನ ಸಂವಾದವಾದ ಗೀತೋಪದೇಶದ ಕ್ರಮವು ಹೇಗೆ ತಿಳಿಯಿತೆಂದರೆ—೧೮ನೇ ಅಧ್ಯಾಯದ ೭೪, ೭೫, ೭೬, ೭೭ ೭೮ನೇ ಶ್ಲೋಕಗಳಲ್ಲಿ ಹೇಳಿರುವಂತೆ—ವ್ಯಾಸರ ಅನುಗ್ರಹದಿಂದ ದಿವ್ಯಜ್ಞಾನವಂ ಪಡೆದು ಸಂಜಯನು ಸಾಕ್ಷಾತ್ತಾಗಿಯೇ ಶ್ರೀ ಕೃಷ್ಣನು ಉಪದೇಶಿಸುತ್ತಿರುವಾಗಲೇ ಈ ಗುಹ್ಯತಮವಾದ ಗೀತೋಪದೇಶವನ್ನು ಕೇಳಿ ಪರಮಾನಂದಭರಿತನಾಗಿ, ದಿವ್ಯದೃಷ್ಟಿಯಿಂದ ಶ್ರೀ ಕೃಷ್ಣನ ವಿಶ್ವರೂಪವನ್ನು ಸಾಕ್ಷಾತ್ಕರಿಸಿ ಅತಿವಿಸ್ಮಯದಿಂದ ಪುನಃ ಪುನಃ ಹೃಷ್ಟನಾಗಿ, ಈಗ ಧೃತರಾಷ್ಟ್ರನಿಗೆ ಹೇಳುತ್ತಾನೆ.

ಭೀಮನು ಪೌಂಡ್ರಕವನ್ನೂ, ಯುಧಿಷ್ಠಿರನು ಅನಂತವಿಜಯವನ್ನೂ, ನಕುಲ ಸಹದೇವರು ಸುಘೋಷಮಣಿ ಪುಷ್ಪಕಗಳನ್ನೂ ಉದ್ಘೋಷಿಸಿದರು. ಇದೇ ಪ್ರಕಾರ ಕಾಶ್ಯ, ಶಿಖಂಡಿ, ಧೃಷ್ಟದ್ಯುಮ್ನ, ವಿರಾಟ, ಸಾತ್ಯಕಿ ಪ್ರಭೃತಿಗಳೆಲ್ಲರೂ ತಮ್ಮ ತಮ್ಮ ಶಂಖಗಳನ್ನು ಊದಿದರು. ಈ ಮಹಾಘೋಷವು ಕೌರವರ ಹೃದಯವನ್ನು ಭೇದಿಸುವಂತೆ ಮೊಳಗಿತು. ಆಗ ರಥಸ್ಥನಾದ ಅರ್ಜುನನು ಸಾರಥಿಯಾದ ಶ್ರೀಕೃಷ್ಣನನ್ನು ನೋಡಿ—"ನನ್ನ ರಥವನ್ನು ಈ ಎರಡು ಸೇನೆಗಳ ಮಧ್ಯದಲ್ಲಿ ನಿಲ್ಲಿಸು. ಯಾರುಯಾರು ಯುದ್ಧಸನ್ನದ್ಧರಾಗಿ ಬಂದು ಕೌರವ ಸೈನ್ಯದಲ್ಲಿ ಸೇರಿರುತ್ತಾರೋ, ಯಾರು ಯಾರೊಡನೆ ನಾನು ಯುದ್ಧಮಾಡಬೇಕೋ ನೋಡುವೆನು"—ಎಂದನು. ಅದೇ ರೀತಿಯಲ್ಲಿ ಶ್ರೀ ಕೃಷ್ಣನು ಉಭಯ ಸೈನ್ಯಮಧ್ಯದಲ್ಲಿ ರಥವನ್ನು ನಿಲ್ಲಿಸಲು, ಅರ್ಜುನನು ಆಗ ಅಲ್ಲಿ ಸೇರಿದ್ದ ಪಿತೃ-ಪಿತಾಮಹ-ಆಚಾರ್ಯ-ಮಾತುಲ-ಭ್ರಾತೃ-ಪುತ್ರ-ಪೌತ್ರ-ಮಿತ್ರ-ಶ್ವಶುರ-ಸುಹೃದ್ವರ್ಗಗಳನ್ನೆಲ್ಲಾ ನೋಡಿ ಇವರೆಲ್ಲರೂ ನಮ್ಮ ಬಂಧುಗಳೆಂದು ಕೃಪಾಪರವಶನಾಗಿ ವಿಷಣ್ಣಚಿತ್ತನಾಗಿ ಶ್ರೀಕೃಷ್ಣನನ್ನು ಕುರಿತು ಹೇಳಿದುದೇನೆಂದರೆ:—

"ಹೇ ಕೃಷ್ಣ! ಯುದ್ಧೋನ್ಮುಖರಾದ ಈ ನಮ್ಮ ಬಂಧುಗಳನ್ನು ನೋಡಿ ನನ್ನ ಶರೀರವೆಲ್ಲಾ ಶೈಥಿಲ್ಯವನ್ನು ಹೊಂದಿದೆ, ಮುಖವು ಬಾಡಿಹೋಗಿದೆ, ಗಾತ್ರಕಂಪವುಂಟಾಗಿ ಮೈಯಲ್ಲಿ ರೋಮಾಂಚವುಂಟಾಗಿದೆ, ಗಾಂಡೀವವು ನನ್ನ ಕೈಯಿಂದ ಜಾರಿಹೋಗುತ್ತಿದೆ, ನನ್ನ ಚರ್ಮವೆಲ್ಲಾ ದಗ್ಧವಾದಂತಿದೆ, ಈ ಅವಸ್ಥೆಯಲ್ಲಿ ನಾನು ಸ್ಥಿರವಾಗಿ ನಿಲ್ಲಲಾರೆನು ನನ್ನ ಮನಸ್ಸೆಲ್ಲಾ ಭ್ರಾಂತವಾಗುತ್ತಿದೆ, ಅಪಶಕುನಗಳು ಕಾಣುತ್ತಿವೆ. ಈ ಸ್ವಜನರನ್ನು ಕೊಂದು ಏನು ಫಲ? ಇದರಿಂದ ಶ್ರೇಯಸ್ಸು ಉಂಟಾಗಲಾರದು. ನನಗೆ ಜಯವೂ ಬೇಡ; ರಾಜ್ಯವೂ ಬೇಡ, ಸುಖವೂ ಬೇಡ. ನಮಗೆ ರಾಜ್ಯದಿಂದೇನು? ಭೋಗಗಳಿಂದೇನು? ಪ್ರಾಣಗಳಿಂದೇನು? ಈ

ನಮ್ಮ ಬಂಧುಗಳೆಲ್ಲರೂ ಯುದ್ಧದಲ್ಲಿ ಹೀಗೆ ಪ್ರಾಣಗಳನ್ನು ಬಿಡಲು ನಿಂತಿರುತ್ತಾರೆ. ಇವರು ನನ್ನನ್ನು ಕೊಂದರೂ ಕೊಲ್ಲಲಿ, ನಾನು ಇವರನ್ನು ಕೊಲ್ಲುವುದಿಲ್ಲ. ಇವರನ್ನು ಕೊಂದರೆ ನಮಗೇನು ಸಂತೋಷ? ಇದರಿಂದ ಪಾಪವೇ ಸಂಭವಿಸುವುದು. ಇವರಿಗೆ ಇದು ಪಾಪವೆಂದು ತಿಳಿಯದು. ಕುಲಕ್ಷಯದೋಷವನ್ನು ತಿಳಿದ ನಾವು ಈ ಪಾತಕಕೃತ್ಯವನ್ನು ಮಾಡಬಾರದು. ಕುಲಕ್ಷಯದಿಂದ ಕುಲಧರ್ಮಗಳೆಲ್ಲಾ ನಷ್ಟವಾಗುವುವು—ಧರ್ಮನಾಶದಿಂದ ಅಧರ್ಮವೃದ್ಧಿ ಯಾಗುವುದು—ಅಧರ್ಮ ವೃದ್ಧಿಯಿಂದ ಕುಲಸ್ತ್ರೀಯರು ಕೆಟ್ಟು ಹೋಗುವರು. ಇದರಿಂದ ವರ್ಣಸಾಂಕರ್ಯ—ಸಾಂಕರ್ಯದಿಂದ ನರಕ, ಪಿತೃಗಳೆಲ್ಲಾ ಅಧೋಗತಿಯನ್ನು ಹೊಂದುವರು. ಈ ಪ್ರಕಾರ ಜಾತಿಧರ್ಮ, ಕುಲಧರ್ಮಗಳೆಲ್ಲಾ ನಷ್ಟವಾದರೆ, ನರಕ ದಲ್ಲಿಯೇ ನಿಯತವಾಸವುಂಟಾಗುವುದು. ನಾವು ಇಂತಹ ಮಹಾ ಪಾಪವನ್ನು ಮಾಡಲು ನಿಶ್ಚಯಿಸಿರುವುದು ಬಹು ಶೋಚನೀಯ ವಾಗಿದೆ. ರಾಜ್ಯಕ್ಕಾಗಿ ಈ ಸ್ವಜನರನ್ನು ನಾನು ಶಸ್ತ್ರಪಾಣಿಯಾಗಿ ಕೊಲ್ಲುವುದಿಲ್ಲ. ನನ್ನನ್ನು ಇವರೆಲ್ಲರೂ ಶಸ್ತ್ರಪಾಣಿಗಳಾಗಿ ಯುದ್ಧ ದಲ್ಲಿ ಕೊಂದರೂ ನನಗೆ ಇದರಿಂದ ಕ್ಷೇಮವೇ ಉಂಟಾಗುವುದು' ಎಂದು ಈ ಪ್ರಕಾರ ಅರ್ಜುನನು ಧನುಸ್ಸನ್ನೂ ಬಾಣಗಳನ್ನೂ ಕೆಳಗೆ ಹಾಕಿ ಶೋಕಾವಿಷ್ಟನಾಗಿ ರಥದಲ್ಲಿಯೇ ಕುಳಿತುಬಿಟ್ಟನು.

೨. **ದ್ವಿತೀಯಾಧ್ಯಾಯದ ಸಾರಾಂಶ**-(ಸಾಂಖ್ಯಯೋಗ) —ಹೀಗೆ ಕೃಪಾವಿಷ್ಟನಾಗಿ ಕಣ್ಣೀರುಬಿಡುತ್ತಿರುವ ಅರ್ಜುನನನ್ನು ನೋಡಿ ಶ್ರೀಕೃಷ್ಣನು—"ಎಲೈ ಅರ್ಜುನನೇ! ಇಂತಹ ಕಶ್ಮಲ ಬುದ್ಧಿಯು ನಿನಗೆ ಎಲ್ಲಿಂದ ಬಂತು? ಹಿರಿಯರಿಂದ ಗರ್ಹಿತವಾದ ಈ ಅಪಕೀರ್ತಿಕರವಾದ ದುರ್ಬುದ್ಧಿಯನ್ನು ಬಿಡು—ಇದು ಸ್ವರ್ಗ ಪ್ರಾಪ್ತಿಗೆ ವಿರುದ್ಧವಾದುದು—ನಿನಗೆ ಇದು ಯುಕ್ತವಲ್ಲ—ಕ್ಷುದ್ರ ವಾದ ಈ ಹೃದಯದೌರ್ಬಲ್ಯವನ್ನು ಬಿಟ್ಟು ಏಳು"—ಎಂದನು.

ಅದಕ್ಕೆ ಅರ್ಜುನನು—ಯುದ್ಧದಲ್ಲಿ ಜಯವು ಒಳ್ಳೆಯದೋ ಅಪಜಯವು ಒಳ್ಳೆಯದೋ ಎಂದು ಸಂದೇಹವುಳ್ಳವನಾಗಿ ಪೂಜ್ಯರಾದ ಗುರುಗಳನ್ನೂ ಸಮೀಪಬಂಧುಗಳನ್ನೂ ಕೊಲ್ಲಲಾರೆನೆಂದು ಹೇಳುತ್ತ—ಸಮ್ಮೂಢಚಿತ್ತನಾಗಿ ಶ್ರೀ ಕೃಷ್ಣನನ್ನು ತನಗೆ ಶ್ರೇಯಸ್ಸು ಯಾವುದೆಂದು ಶಿಷ್ಯವೃತ್ತಿಯಿಂದ ಕೇಳಿದನು.

ಹೀಗೆ ಯುದ್ಧಕ್ಕೆ ಇಷ್ಟಪಡದೆ ಇರುವ ಅರ್ಜುನನನ್ನು ನೋಡಿ ಶ್ರೀ ಕೃಷ್ಣನು ಇವನ ದೇಹಾತ್ಮಾಭಿಮಾನವನ್ನು ಹೋಗಲಾಡಿಸಬೇಕೆಂದು ಉದ್ದೇಶಿಸಿ, ಆತ್ಮತತ್ವಜ್ಞಾನವೇ ಸಂಸಾರ ನಿವರ್ತಕವೆಂದು ನಿರೂಪಿಸಿ, ಯುದ್ಧಮಾಡುವ ವಿಷಯದಲ್ಲಿ ಶರೀರ ವಿಯೋಗವನ್ನು ಕುರಿತು ಶೋಕಮೋಹಗಳಿಗೆ ಕಾರಣವಿಲ್ಲವೆಂದು ಹೇಳಿದನು--ಅನಂತರ ಆತ್ಮತತ್ವಜ್ಞಾನಕ್ಕೆ ಹೇತುಭೂತವಾದ ಕರ್ಮಾನುಷ್ಠಾನಪ್ರಕಾರವನ್ನೂ ಸಮಾಧಿಯೋಗಸ್ವರೂಪವನ್ನೂ ನಿರೂಪಿಸಿ, ಸ್ಥಿತಪ್ರಜ್ಞನೆಂಬ ಜ್ಞಾನನಿಷ್ಠನ ಲಕ್ಷಣವನ್ನೂ ಉಪದೇಶಿಸಿದನು.

೩. **ತೃತೀಯಾಧ್ಯಾಯದ ಸಾರಾಂಶ**-(ಕರ್ಮಯೋಗ)-ಹೀಗೆ ಉಪದೇಶಿಸಿದ ಅರ್ಥಗಳನ್ನು ಕೇಳಿ ಅರ್ಜುನನು ಕರ್ಮಯೋಗ ಜ್ಞಾನಯೋಗಗಳೊಳಗೆ ಯಾವುದು ಅನುಷ್ಠೇಯವೆಂದು ಪುನಃ ಪ್ರಶ್ನೆಮಾಡಿ ತನ್ನ ಸಂಶಯವನ್ನು ನಿವಾರಿಸಬೇಕೆಂದು ಪ್ರಾರ್ಥಿಸಿದನು. ಆಗ ಶ್ರೀ ಕೃಷ್ಣನು ಸಾಂಖ್ಯರಿಗೆ ಜ್ಞಾನಯೋಗವೆಂತಲೂ, ಯೋಗಿಗಳಿಗೆ ಕರ್ಮಯೋಗವೆಂತಲೂ ಎರಡು ಪ್ರಕಾರಗಳನ್ನೂ ವರ್ಣಿಸಿ ಕರ್ಮನಿಷ್ಠೆಯನ್ನು ಯಾರೂ ಬಿಡುವುದಕ್ಕಾಗುವುದಿಲ್ಲವೆಂದು ತಿಳಿಸಿ, ಮನುಷ್ಯಲೋಕಕ್ಕೂ ದೇವಲೋಕಕ್ಕೂ ಇರುವ ಪರಸ್ಪರೋಪಕಾರಕತ್ವವನ್ನೂ ವಿವರಿಸಿ, ದೇವತೆಗಳ ಆರಾಧನರೂಪವಾದ ಯಜ್ಞವು ಕರ್ಮಸಮುದ್ಭವವೆಂದೂ, ಕರ್ಮವು (ಬ್ರಹ್ಮೋದ್ಭವ) ವೇದೋದ್ಭವವೆಂದೂ, (ಬ್ರಹ್ಮವು) ವೇದವು ಅಕ್ಷರ ಸಮುದ್ಭವ

ವೆಂದೂ ಈ ಪ್ರಕಾರ ಕಾರ್ಯಕಾರಣಭಾವವನ್ನು ನಿರೂಪಿಸಿ, ಆತ ಜ್ಞಾನೈಕನಿಷ್ಠನಿಗೆ ಕರ್ತವ್ಯಾಂಶವೇ ಇಲ್ಲವೆಂದು ಸೂಚಿಸಿ, ಅವನ ಕರ್ಮಗಳಿಗೆ ಫಲವೇ ಇಲ್ಲವೆಂದು ತಿಳಿಸಿ ಫಲಸಂಗವಿಲ್ಲದೆ ಲೋಕ ಸಂಗ್ರಹಣಾರ್ಥವಾಗಿಯಾದರೂ ಕರ್ಮಗಳನ್ನು ಅವಶ್ಯವಾಗಿ ಆಚರಿಸ ಬೇಕೆಂದು ಉಪದೇಶಿಸಿದನು. ಅನಂತರ ಅರ್ಜುನನು ಚೇತನ ಪಾಪ ಕರ್ಮ ಪ್ರವೃತ್ತಿಗೆ ಕಾರಣವೇನೆಂದು ಕೇಳಲು ಶ್ರೀ ಕೃಷ್ಣನು ರಜೋ ಗುಣ ಸಮುತ್ಪನ್ನವಾದ ಕಾಮವೇ ಕ್ರೋಧಾದಿರೂಪವಾಗಿ ಪರಿಣಮಿಸಿ ಪಾಪಕರ್ಮ ಜನಕವಾಗುತ್ತೆಂದು ತಿಳಿಸಿ ಕಾಮಕ್ಕೆ ಆಶ್ರಯವಾದ ಇಂದ್ರಿಯ ಮನೋಬುದ್ಧಿಗಳನ್ನು ವಿವರಿಸಿ ಇಂದ್ರಿಯ ಜಯದಿಂದಲೇ ಕಾಮ ಜಯವುಂಟಾಗುವುದೆಂದೂ ಬೋಧಿಸಿದನು.

೪. **ಚತುರ್ಥಾಧ್ಯಾಯದ ಸಾರಾಂಶ**–(ಜ್ಞಾನಯೋಗ)– "ನಿನಗೆ ಹೀಗೆ ಉಪದಿಷ್ಟವಾದ ಕರ್ಮಯೋಗಜ್ಞಾನಯೋಗ ಸ್ವರೂಪ ವನ್ನು ಪೂರ್ವದಲ್ಲಿ ನಾನು ಆದಿತ್ಯನಿಗೆ ಉಪದೇಶಿಸಿದನು. ಆದಿತ್ಯನು ಮನುವಿಗೆ ಉಪದೇಶಿಸಿದನು. ಮನುವು ಇಕ್ಷ್ವಾಕುವಿಗೆ ಉಪದೇಶಿಸಿ ದನು. ಹೀಗೆ ಪರಂಪರಾಪ್ರಾಪ್ತವಾದ ಅರ್ಥವನ್ನು ರಾಜರ್ಷಿಗಳು ತಿಳಿದುಕೊಂಡಿದ್ದರು. ಈಗ ಬಹುಕಾಲವಾದುದರಿಂದ ಈ ಯೋಗವು ನಷ್ಟವಾಯಿತು. ಇದನ್ನು ನನ್ನ ಮಿತ್ರನಾದ ನಿನಗೆ ಉತ್ತಮ ರಹಸ್ಯವೆಂದು ಉಪದೇಶಿಸಿ ಇರುತ್ತೇನೆ." ಎಂದು ಶ್ರೀ ಕೃಷ್ಣನು ಹೇಳಿದನು. ಅರ್ಜುನನು ಇದನ್ನು ಕೇಳಿ ನೀನೇ ಪೂರ್ವದಲ್ಲಿ ಇದನ್ನು ಆದಿತ್ಯನಿಗೆ ಉಪದೇಶಿಸಿದೆ ಎಂಬುದಕ್ಕೆ ಪ್ರಮಾಣವೇನು? ನಾನು ತಿಳಿಯುವಹಾಗೆ ವಿವರಿಸಿ ಹೇಳು"—ಎಂದನು.

ಆಗ ಶ್ರೀ ಕೃಷ್ಣನು ತನ್ನ ಅವತಾರಗಳ ಸ್ವರೂಪವನ್ನೂ ಉದ್ದೇಶವನ್ನೂ ವಿಸ್ತರಿಸಿ ಹೇಳಲಾರಂಭಿಸಿದನು. "ನಾನು ಜನ್ಮ ರಹಿತನಾದರೂ ನನ್ನ ಮಾಯೆಯಿಂದಲೇ ನಾನು ನನ್ನ ಪ್ರಕೃತಿ ಯನ್ನು ಆಶ್ರಯಿಸಿ ಅವತರಿಸುತ್ತೇನೆ. ಯಾವ ಯಾವ ಕಾಲದಲ್ಲಿ

ಧರ್ಮಗ್ಲಾನಿಯುಂಟಾಗುತ್ತದೆಯೋ ಅಧರ್ಮೋಚ್ಛ್ರಾಯವುಂಟಾಗುತ್ತದೆಯೋ ಆಯಾ ಸಮಯದಲ್ಲಿ ನಾನು ನನ್ನ ಅವತಾರವನ್ನು ಪ್ರಕಾಶಪಡಿಸುತ್ತೇನೆ. ಆಯಾಯುಗಗಳಲ್ಲಿ ಸಾಧುಪರಿತ್ರಾಣಾರ್ಥವಾಗಿಯೂ, ದುಷ್ಟನಿಗ್ರಹಾರ್ಥವಾಗಿಯೂ, ಧರ್ಮಪ್ರತಿಷ್ಠಾಪನಾರ್ಥವಾಗಿಯೂ ಅವತರಿಸುತ್ತೇನೆ.''—ಎಂದು ಅವತಾರಗಳ ಕಾಲ ಮತ್ತು ಉದ್ದೇಶಗಳನ್ನು ತಿಳಿಸಿ ಈ ಅವತಾರ ಮಹಾತ್ಮವನ್ನು ತಿಳಿಯುವವರಿಗೆ ಪುನರ್ಜನ್ಮವಿಲ್ಲದೆ ತನ್ನ ಸಾನ್ನಿಧ್ಯವುಂಟಾಗುವುದೆಂದು ಶ್ರೀ ಕೃಷ್ಣನು ಹೇಳಿದನು. ಅನಂತರ ಕರ್ಮಾನುಗುಣವಾಗಿ ಸಿದ್ಧಿಯುಂಟಾಗುವುದೆಂದು ಸೂಚಿಸಿ ಚಾತುರ್ವರ್ಣ್ಯ ಸೃಷ್ಟಿಯನ್ನೂ ಗುಣಕರ್ಮವಿಭಾಗಾನುಸಾರವಾಗಿ ತಾನೇ ಮಾಡಿದನೆಂದು ನಿರೂಪಿಸಿದನು. ಫಲಾಭಿಸಂಧಿಯಿಲ್ಲದೆ ಕರ್ಮವನ್ನು ಆಚರಿಸಬೇಕೆಂದು ಅರ್ಜುನನಿಗೆ ಉಪದೇಶಿಸಿ ಪ್ರವೃತ್ತಿಮಾರ್ಗ (ಕರ್ಮ)—ನಿವೃತ್ತಿಮಾರ್ಗ (ಅಕರ್ಮ) ಈ ಎರಡುಮಾರ್ಗಗಳಿಗೂ ತಾರತಮ್ಯವನ್ನು ತಿಳಿಸಿದನು. ಅನಂತರ ಬ್ರಹ್ಮಕರ್ಮಸಮಾಧಿಯನ್ನೂ ಜ್ಞಾನ ಯಜ್ಞದ ಶ್ರೇಷ್ಠತ್ವವನ್ನೂ ಉಪದೇಶಿಸಿ, ಇಂದ್ರಿಯ ಸಂಯಮ ಪ್ರಕಾರಗಳನ್ನೂ ವರ್ಣಿಸಿ, ದ್ರವ್ಯಯಜ್ಞಾದಿ ಪ್ರಾಣಾಯಾಮಾಂತವಾದ ಕರ್ಮಯೋಗ ಭೇಧಗಳನ್ನೂ ನಿರೂಪಿಸಿ ಅವುಗಳೆಲ್ಲಾ ಜ್ಞಾನದಲ್ಲೇ ಪರಿಸಮಾಪ್ತಿಯೆಂದು ವಿವರಿಸಿದನು. ಈ ಪ್ರಕಾರ ಜ್ಞಾನಯೋಗ ನಿರೂಪಣವಂ ಮಾಡಿ ಈ ಜ್ಞಾನದಿಂದಲೇ ಸರ್ವ ಸಂಶಯ ನಿವೃತ್ತಿಯೂ ಪರಮೋತ್ಕೃಷ್ಟವಾದ ಶಾಂತಿಯೂ ಉಂಟಾಗುವುವೆಂದು ಸ್ಥಿರಪಡಿಸಿದನು.

೫. **ಪಞ್ಚಮಾಧ್ಯಾಯದ ಸಾರಾಂಶ**(ಕರ್ಮಸನ್ಯಾಸಯೋಗ)

ಅನಂತರ ಅರ್ಜುನನು–ಕರ್ಮಯೋಗಜ್ಞಾನಭೋಗಗಳಲ್ಲಿ ಯಾವುದು ಅನುಷ್ಠೆಯವೋ ಅದನ್ನು ನಿಷ್ಕರ್ಷಿಸಿ ತಿಳಿಸಬೇಕೆಂದು ಪ್ರಾರ್ಥಿಸಿದನು. ಅದಕ್ಕೆ ಶ್ರೀಕೃಷ್ಣನು ಉಪದೇಶಿಸಿದ ಕ್ರಮವೆಂತೆಂದರೆ:—

"ಕರ್ಮಸನ್ಯಾಸ ರೂಪವಾದ ಜ್ಞಾನಯೋಗವೂ ಮತ್ತು ಕರ್ಮಯೋಗವೂ ಇವೆರಡೂ ಶ್ರೇಯಸ್ಸಾಧಕಗಳಾಗಿದ್ದಾಗ್ಯೂ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಸುಖಕರವಾದುದು. ಫಲಸಿದ್ಧಿಯು ಒಂದೇ ಆದುದರಿಂದ ಪಂಡಿತರು ಇವುಗಳಿಗೆ ಭೇದವನ್ನು ಎಣಿಸಲಾರರು. ಮತ್ತು ಜ್ಞಾನಯೋಗವು ಕರ್ಮಯೋಗವಿಲ್ಲದೆ ಸಾಧ್ಯವಾಗುವುದಿಲ್ಲ. ಆದುದರಿಂದ ಕರ್ಮಯೋಗವನ್ನೇ ಆಶ್ರಯಿಸಿದರೆ ಫಲಸಿದ್ಧಿಯು ನಿಶ್ಚಿತವಾಗುವುದು. ಕರ್ಮಯೋಗನಿಷ್ಠನು ಜಿತೇಂದ್ರಿಯನಾಗಿ ಆತ್ಮಯಥಾತ್ಮ ಜ್ಞಾನಸಂಪನ್ನನಾಗುವುದರಿಂದ ಯಾವ ಕರ್ಮಲೋಪವೂ ಅವನಿಗೆ ಉಂಟಾಗಲಾರದು. ಕರ್ಮಫಲ ಸಂಗವಂ ಬಿಟ್ಟು ಆತ್ಮಶುದ್ಧಿಗೋಸ್ಕರ ಕರ್ಮಾನುಷ್ಠಾನವಂ ಮಾಡುವವನೇ ಕರ್ಮಯೋಗಿಯು. ಫಲಾಪೇಕ್ಷೆಯೊಡನೆ ಕರ್ಮಗಳನ್ನು ಆಚರಿಸುವವನು ಆತ್ಮಾವಲೋಕನವಿಲ್ಲದೆ ಸಂಸಾರ ಬನ್ಧಕ್ಕೆ ಒಳಗಾಗುವನು. ಜೀವಾತ್ಮನು ಸ್ವಭಾವತಃ ಅಕರ್ಮವಶ್ಯನು. ಇವನಿಗೆ ಕರ್ತೃತ್ವಾದಿ ಸಂಯೋಗವೇ ಇಲ್ಲ. ಅಜ್ಞಾನದಿಂದ ಕರ್ತೃತ್ವಾದಿಗಳ ಸಂಬಂಧವು ತೋರುವುದು. ಯಾರಿಗೆ ಸವಿಾಚೀನ ಜ್ಞಾನವು ಇದೆಯೋ ಅವರಿಗೆ ಸರ್ವವಿಧವಾದ ಅಜ್ಞಾನವೂ ನಷ್ಟವಾಗುವುದು. ಅವರ ಜ್ಞಾನವು ಆದಿತ್ಯನಂತೆ ಸರ್ವಪ್ರಕಾಶವಾಗುವುದು. ಜ್ಞಾನಿಯಾದವನಿಗೆ ಸಮದರ್ಶಿತ್ವವುಂಟಾಗುವುದರಿಂದ ಸರ್ವವೂ ಬ್ರಹ್ಮಾತ್ಮಕವಾಗಿಯೇ ತೋರುವುದು. ಸರ್ವ ವಸ್ತುಗಳಲ್ಲಿಯೂ ಪರಮಾತ್ಮನು ಸಮತ್ವೇನ ಅನ್ತರ್ಯಾಮಿಯಾಗಿಯೇ ಇರುವುದರಿಂದ ಜ್ಞಾನೈಕಾಕಾರವಾದ ಜೀವಾತ್ಮ ವರ್ಗವೆಲ್ಲವೂ ಅಂತಹ ಜ್ಞಾನಿಗೆ ಪರಮಾತ್ಮ ರೂಪವಾಗಿಯೇ ತೋರುವುದು. ವಿದ್ಯಾವಿನಯ ಸಂಪನ್ನ ಬ್ರಾಹ್ಮಣ-ಗೋ-ಹಸ್ತಿ-ಶುನಕ-ಶ್ವಪಾಕ-ಎಂಬ ಬೇಧಗಳೆಲ್ಲಾ ಶರೀರಗತವಾದವುಗಳಾದುದರಿಂದ, ಆತ್ಮತತ್ವ ಸ್ವರೂಪದಲ್ಲಿಯೂ ಜ್ಞಾನೈಕಾಕಾರತ್ವೇನ ಸಾಮ್ಯವೇ ಪ್ರಕಾಶಿಸುವುದು. ಇಂತಹ

ಬ್ರಹ್ಮಜ್ಞಾನಿಗೆ ಆತ್ಮೀಯವಾದ ಸುಖವು ಉಂಟಾಗುವುದು. ಬಾಹ್ಯ ವಿಷಯಗಳಿಂದ ವಿನಿವೃತ್ತನಾಗಿ ಯೋಗಮಾರ್ಗದಿಂದ ಅಂತರ್ಮುಖನಾಗಿ ಇಂದ್ರಿಯ, ಮನೋನಿಯಮನ ವುಳ್ಳವನು ಮೋಕ್ಷಪರಾಯಣನಾಗಿ ಇಲ್ಲಿಯೇ ಮುಕ್ತನಾಗುವನು. ಅಂತಹ ಜ್ಞಾನಿಯು ಸರ್ವೇಶ್ವರನಾದ ನನ್ನನ್ನೆ ಹೊಂದಿ ಸುಖಿಯಾಗುವನು.''

೬. **ಷಷ್ಠಾಧ್ಯಾಯದ ಸಾರಾಂಶ**—(ಅಭ್ಯಾಸಯೋಗ)—ಈ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಜ್ಞಾನಯೋಗ-ಕರ್ಮಯೋಗಗಳೆರಡರಿಂದಲೂ ಸಾಧ್ಯವಾದ ಆತ್ಮಾವಲೋಕನ ರೂಪವಾದ ಯೋಗಾಭ್ಯಾಸ ವಿಧಿಯನ್ನು ಅರ್ಜುನನಿಗೆ ಉಪದೇಶಿಸುತ್ತಾನೆ. ಅದೆಂತೆಂದರೆ—

"ಯಾವನು ಫಲಾಪೇಕ್ಷೆಯಿಲ್ಲದೆ ವಿಹಿತ ಕರ್ಮಾಚರಣವಂ ಮಾಡುತ್ತಾನೋ ಅವನು ಜ್ಞಾನಯೋಗಿಯೂ ಮತ್ತು ಕರ್ಮಯೋಗಿಯೂ ಆಗಿ ಆತ್ಮಾವಲೋಕನ ರೂಪವಾದ ಯೋಗನಿಷ್ಠೆಯಂ ಪಡೆಯುವನು. (ಯಾವನು ಕೇವಲ ಜ್ಞಾನಯೋಗವನ್ನೇ ಆಶ್ರಯಿಸುತ್ತಾನೋ ಅವನು ಕರ್ಮಯೋಗ ಫಲವನ್ನು ಹೊಂದಲಾರನು.) ಕರ್ಮಸನ್ಯಾಸವೆಂಬ ಜ್ಞಾನಯೋಗವೂ ಕರ್ಮಯೋಗದಲ್ಲಿ ಅಂತರ್ಭೂತವಾಗುವುದು. ಆದುದರಿಂದ ಅಸನ್ನ್ಯಸ್ತಸಙ್ಕಲ್ಪನಾದ ಯೋಗಿಯೇ ಯಾವನೂ ಇಲ್ಲ. ಕರ್ಮಯೋಗವೇ ಯೋಗಸಿದ್ಧಿಯನ್ನುಂಟುಮಾಡುತ್ತದೆ. ಯೋಗಾರಂಭಕ್ಕೆ ಕರ್ಮಯೋಗವೇ ಕಾರಣವಾದಾಗ್ಯೂ ಯೋಗಾರೂಢನಾದಮೇಲೆ ಶಮವೆಂಬ ಕರ್ಮನಿವೃತ್ತಿಯೇ ಸಿದ್ಧಿಗೆ ಕಾರಣವಾಗುವುದು. ಆತ್ಮಾನುಭವಮಾತ್ರನಿಷ್ಠನಾಗಿ ಇಂದ್ರಿಯಾರ್ಥಗಳಲ್ಲೂ ತತ್ಸಮುಸ್ಥಿ ಕರ್ಮಗಳಿಂದಲೂ ಪ್ರವರ್ತಿಸದೆ ಇರುವವನೆ ಯೋಗಾರೂಢನು. ವಿಷಯಸಂಗವಿಲ್ಲದಂತೆ ಮನೋಜಯವಂ ಪಡೆದವನೆ ಆತ್ಮೋದ್ಧಾರವಂ ಪಡೆಯುವನು."

ಇತ್ಯಾದಿ ಪ್ರಕಾರಗಳಲ್ಲಿ ಯೋಗಾರಂಭ ಯೋಗ್ಯದೆಶೆಯನ್ನು ಸಮಬುದ್ಧಿ ಲಕ್ಷಣವನ್ನೂ ಹೇಳಿ ಯೋಗಿಯು ನಿರ್ಜನವಾದ ಸ್ಥಳದಲ್ಲಿ ಏಕಾಂಕಿಯಾಗಿ ನಿಯಮಗಳೊಡನೆ ಇರಬೇಕೆಂಬುದನ್ನು, ಅವನು ಶುಚಿಯಾದ ಸ್ಥಳದಲ್ಲಿ ಸ್ಥಿರಾಸನದಲ್ಲಿ ಕುಳಿತು ಏಕಾಗ್ರಚಿತ್ತನಾಗಿ ನಾಸಿಕಾಗ್ರವನ್ನೇ ಲಕ್ಷ್ಯವಾಗಿಟ್ಟುಕೊಂಡು ಪರಮಾತ್ಮನಾದ ನನ್ನಲ್ಲೇ ಚಿತ್ತವನ್ನು ಇಟ್ಟು ನಿಶ್ಚಲಚಿತ್ತನಾಗಿರಬೇಕು." ಎಂತಲೂ ವಿವರಿಸಿ, ಅಂತಹ ಯೋಗಿಗೆ ಉಂಟಾಗುವ ಶಾಂತಿಯನ್ನೂ ಸುಖವನ್ನೂ ವರ್ಣಿಸಿದನು. ಅನಂತರ ಚತುರ್ವಿಧ ಯೋಗಿಗಳ ಸ್ವರೂಪವನ್ನೂ ತಿಳಿಸಿದನು.

ಈ ಪ್ರಕಾರ ಸಮದರ್ಶನವುಳ್ಳ ಯೋಗಿಯ ಲಕ್ಷಣವಂ ತಿಳಿಸಿದ ಶ್ರೀ ಕೃಷ್ಣನನ್ನು ನೋಡಿ ಅರ್ಜುನನು—"ನೀನು ಹೇಳಿದ ಸರ್ವತ್ರ ಸಮದರ್ಶನರೂಪವಾದ ಯೋಗದ ಸ್ಥಿತಿಯನ್ನು ನಾನು ತಿಳಿಯಲಾರೆನು. ನನ್ನ ಮನಸ್ಸು ಅತಿ ಚಞ್ಚಲವಾಗಿದೆ"—ಎಂದು ಹೇಳಿದನು. ಶ್ರೀ ಕೃಷ್ಣನು ಮನೋನಿಗ್ರಹವು ಅಭ್ಯಾಸ-ವೈರಾಗ್ಯ ಸಾಧ್ಯವೆಂದು ಹೇಳಿ, "ಚಂಚಲಚಿತ್ತನಾಗಿ ಯೋಗಸಿದ್ಧಿಯಂ ಪಡೆಯದೆ ಹೋದವನೂ ಕೂಡ ಪುಣ್ಯಶಾಲಿಗಳು ಹೊಂದುವ ಲೋಕಗಳಲ್ಲಿ ಬಹುಕಾಲದವರೆಗೆ ಭೋಗಗಳಂ ಅನುಭವಿಸಿ ಪವಿತ್ರವಾದ ಶ್ರೀಮಂತರ ವಂಶದಲ್ಲಿ ಹುಟ್ಟಿ ಕ್ರಮೇಣಯೋಗಫಲವಂ ಪಡೆಯುವನು"—ಎಂದು ವಿವರಿಸಿ, "ತಪಸ್ವಿಗಳಿಗಿಂತಲೂ, ಜ್ಞಾನಿಗಳಿಗಿಂತಲೂ, ಕರ್ಮಿಗಳಿಗಿಂತಲೂ, ಯೋಗಿಯೇ ಶ್ರೇಷ್ಠನಾದುದರಿಂದ ನೀನು ಯೋಗಿಯಾಗಿ ನನ್ನನ್ನೇ ಭಜಿಸಿ ನನಗೆ ಪ್ರಿಯತಮನಾಗು"—ಎಂದು ಅರ್ಜುನನಿಗೆ ಉಪದೇಶಿಸಿದನು.

## ದ್ವಿತೀಯ ಷಟ್ಕ

೭. **ಸಪ್ತಮಾಧ್ಯಾಯದ ಸಾರಾಂಶ** — (ಪರಮಹಂಸ ವಿಜ್ಞಾನಯೋಗ)—ಪ್ರಥಮಷಟ್ಕದಲ್ಲಿ ಶ್ರೀಮನ್ನಾರಾಯಣನ ಪ್ರಾ

ಪ್ತಿಗೆ ಉಪಾಯವಾದ ಉಪಾಸನಕ್ಕೆ ಅಂಗಭೂತವಾದ ಕರ್ಮಯೋಗದ ಸ್ವರೂಪವೂ, ಜ್ಞಾನಯೋಗದ ಸ್ವರೂಪವೂ, ಆತ್ಮಜ್ಞಾನವೂ, ವಿವರಿಸಲ್ಪಟ್ಟವು. ದ್ವಿತೀಯ ಷಟ್ಕದಲ್ಲಿ—ಪರಮಾತ್ಮೋಪಾಸನಾತ್ಮಕವಾದ ಭಕ್ತಿಯೋಗದ ಸ್ವರೂಪವು ವರ್ಣಿಸಲ್ಪಡುತ್ತದೆ.

ಈ ಸಪ್ತಮಾಧ್ಯಾಯದಲ್ಲಿ—ಶ್ರೀ ಕೃಷ್ಣನು ಅರ್ಜುನನನ್ನು ಕುರಿತು—"ಎಲೈ ಪಾರ್ಥನೇ! ನನ್ನ ಜ್ಞಾನವು ಸಮಗ್ರವಾಗಿ ಉಂಟಾಗುವಂತೆ ನಿನಗೆ ಉಪದೇಶಮಾಡುತ್ತೇನೆ, ಕೇಳು. ಜ್ಞಾನ ಮತ್ತು ವಿಜ್ಞಾನ—ಎಂಬೀ ಎರಡನ್ನೂ ನಿನಗೆ ಬೋಧಿಸುವೆನು. ಇದನ್ನು ತಿಳಿದುಕೊಂಡರೆ ನಿನಗೆ ಜ್ಞಾತವ್ಯಾಂಶವು ಬೇರೆ ಯಾವುದೂ ಇರಲಾರದು. ನನ್ನನ್ನು ತತ್ವತಃ ತಿಳಿದವರು ಅತ್ಯಂತ ದುರ್ಲಭರು." —ಎಂದು ಹೇಳಿ, ಪ್ರಕೃತಿಯು—ಭೂಮಿ-ಜಲ-ಅಗ್ನಿ-ವಾಯು-ಆಕಾಶ-ಮನಸ್ಸು-ಬುದ್ಧಿ-ಅಹಂಕಾರ ಎಂಬೀಪ್ರಕಾರಗಳುಳ್ಳದುದೆಂದು ವಿವರಿಸಿ, "ಜೀವಭೂತವಾದ ಮತ್ತೊಂದು ನನ್ನ ಪ್ರಕೃತಿಯು ಇದೆ. ಈ ಪ್ರಕೃತಿದ್ವಯವೂ ನನಗೆ ಸೇರಿದುದು. ಚಿದಚಿದಾತ್ಮಕವಾದ ಪ್ರಪಂಚಕ್ಕೆಲ್ಲಾ ನಾನೇ ಉತ್ಪಾದಕನೂ ಮತ್ತು ಸಂಹಾರಕನೂ ಆಗಿರುತ್ತೇನೆ. ನನಗಿಂತ ಅಧಿಕವಾದ ವಸ್ತುವು ಯಾವುದೂ ಇಲ್ಲ."—ಎಂದು ವಿವರಿಸಿ, ತಾನು ಯಾವ ಯಾವ ವಸ್ತುಗಳಲ್ಲಿ ಯಾವ ಯಾವ ಮುಖ್ಯಾಂಶವಾಗಿರುತ್ತಾನೋ ಅದನ್ನೂ ವರ್ಣಿಸಿ, ಸಾತ್ವಿಕ-ರಾಜಸ-ತಾಮಸವೆಂಬ ತ್ರಿವಿಧಭಾವಗಳನ್ನೂ ವಿವರಿಸಿ, ಈ ತ್ರಿಗುಣಾತ್ಮಕವಾದ ಮಾಯಾಸ್ವರೂಪವನ್ನು ಆಸುರಪ್ರಕೃತಿಗಳು ತಿಳಿಯಲಾರರೆಂದು ಹೇಳಿ, ಆರ್ತ-ಜಿಜ್ಞಾಸು-ಅರ್ಥಾರ್ಥಿ-ಜ್ಞಾನಿಯೆಂಬ ೪ ವಿಧ ಸುಕೃತಗಳ ಲಕ್ಷಣವನ್ನೂ ಸೂಚಿಸಿ, ಅವರಲ್ಲಿ ಜ್ಞಾನಿಯೇ ಶ್ರೇಷ್ಠನೆಂದೂ ತನಗೆ ಪ್ರಿಯತಮನೆಂದೂ ವಿಶದೀಕರಿಸಿ, "ಇತರ ದೇವತಾ ಭಜನೆಮಾಡುವವರೂ ಕೂಡ ನನ್ನ ಅಂಗಭೂತರಾದ ಇಂದ್ರಾದಿ ದೇವತೆಗಳನ್ನೇ ಆಶ್ರಯಿಸಿ ಅಲ್ಪ ಫಲವನ್ನು

ಹೊಂದುತ್ತಾರೆ ನನ್ನನ್ನೇ ಭಜಿಸುವವರು ನನ್ನನ್ನೇ ಹೊಂದುವರು." ಎಂದು ಹೇಳಿ ತ್ರಿವಿಧ ಭಕ್ತಸ್ವರೂಪವನ್ನೂ ವಿವರಿಸಿದನು.

೮. **ಅಷ್ಟಮಾಧ್ಯಾಯದ ಸಾರಾಂಶ** (ಅಕ್ಷರ ಪರಬ್ರಹ್ಮ ಯೋಗ)--ಅನಂತರ ಅರ್ಜುನನು--"ನೀನು ಹೇಳಿದ ಬ್ರಹ್ಮ-ಅಧ್ಯಾತ್ಮ-ಕರ್ಮ-ಎಂಬಿವುಗಳನ್ನೂ, ಅಧಿಭೂತ-ಅಧಿದೈವ-ಅಧಿಯಜ್ಞ ಎಂಬಿವುಗಳನ್ನೂ ವಿವರಿಸು. ಪ್ರಯಾಣಕಾಲದಲ್ಲಿ ನಿನ್ನನ್ನು ತಿಳಿಯುವುದು ಹೇಗೆ?"--ಎಂದು ಕೇಳಿದನು. ಶ್ರೀ ಕೃಷ್ಣನು ಅವನನ್ನು ಕುರಿತು ಈ ಪ್ರಕಾರ ಉಪದೇಶಿಸಿದನು.

"ಕ್ಷೇತ್ರಜ್ಞ ಸಮಷ್ಟಿರೂಪವಾದ ಅಕ್ಷರವೇ ಬ್ರಹ್ಮವೆಂದು ಕರೆಯಲ್ಪಡುವುದು. ಪ್ರಾಕೃತಿವಿನಿರ್ಮುಕ್ತವಾದ ಆತ್ಮಸ್ವರೂಪವೇ ಪರಮಾಕ್ಷರ. ಸ್ವಪ್ರಕೃತಿಯೇ ಅಧ್ಯಾತ್ಮವೆಂದು ಕರೆಯಲ್ಪಡುವುದು. ಮನುಷ್ಯಾ ಭಾವಜನಕವಾದ ಯೋಷಿತ್ಸಂಬಂಧಜನ್ಯವಾದ ವಿಸರ್ಗವೇ ಕರ್ಮವೆಂದು ಕರೆಯಲ್ಪಡುವುದು. ಐಶ್ವರ್ಯಾರ್ಥಿಗಳಿಂದ ಜ್ಞಾತವ್ಯವಾದ ಶಬ್ದ ಸ್ಪರ್ಶರೂಪರಸಗಂಧಗಳೇ **ಅಧಿಭೂತ** ವೆಂದೂ, ಅವರಿಂದ ಪ್ರಾಪ್ಯನಾದ ಭೋಕ್ತೃಪುರುಷನೇ **ಅಧಿದೈವತ** ವೆಂದೂ, ನನಗೆ ದೇಹಭೂತರಾದ ಇಂದ್ರಾದಿಗಳಿಗೆ ಅಂತರಾತ್ಮನಾದ ನಾನೇ ಅಧಿಯಾಜ್ಞವೆಂತಲೂ ತಿಳಿ.

ಮತ್ತು ಅಂತ್ಯಕಾಲದಲ್ಲಿ ನನ್ನನ್ನೇ ಸ್ಮರಿಸುತ್ತ ಯಾವನು ಶರೀರವನ್ನು ಬಿಟ್ಟು ಹೋಗುವನೋ ಅವನು ನನ್ನನ್ನೇ ಹೊಂದುವನು. ಅಂತ್ಯಕಾಲದಲ್ಲಿ ಯಾವುದನ್ನು ಸ್ಮರಿಸುತ್ತಾನೋ ತದ್ಭಾವವೇ ಬರುತ್ತೆಂದು ಶಾಸ್ತ್ರವು ಹೇಳುವುದರಿಂದ ನನ್ನನ್ನೇ ಸರ್ವಕಾಲಗಳಲ್ಲೂ ಸ್ಮರಿಸುತ್ತ ನೀನು ಯುದ್ಧಾದಿಕರ್ಮಗಳನ್ನು ಆಚರಿಸು. ಹೀಗೆ ಮಾಡಿದರೆ ಅಂತ್ಯಕಾಲದಲ್ಲೂ ನನ್ನನ್ನೇ ಸ್ಮರಿಸಿ ನನ್ನನ್ನೇ ಹೊಂದುವಿ. ಈ ವಿಷಯದಲ್ಲಿ ಸಂಶಯವಿಲ್ಲ."

ಈ ಪ್ರಕಾರ ಉಪದೇಶಿಸಿ ಯೋಗಬಲದಿಂದ ಭ್ರೂಮಧ್ಯದಲ್ಲಿ ಪ್ರಾಣಪ್ರತಿಷ್ಠೆಯಂಮಾಡಿ ಧ್ಯಾನಮಾಡುವವನಿಗೆ ಪರಮಪುರುಷ ಪ್ರಾಪ್ತಿಯೆಂದು ಹೇಳಿ, ಕೈವಲ್ಯಾರ್ಥಿಯ ಸ್ಮರಣ ಪ್ರಕಾರವನ್ನೂ ವರ್ಣಿಸಿ, ಭಗವದುಪಾಸನ ಪ್ರಕಾರವನ್ನೂ ತತ್ಫಲವನ್ನೂ ನಿರೂಪಿಸಿ, ಐಶ್ವರ್ಯಾರ್ಥಿಗೆ ಪುನರಾವೃತ್ತಿಯನ್ನೂ ಕೈವಲ್ಯಾರ್ಥಿಗೆ ಅಪುನರಾವೃತ್ತಿಯನ್ನೂಹೇಳಿ, ಭಗವತ್ಪ್ರಾಪ್ತಿಕಾಮನಾದ ಜ್ಞಾನಿಯ ವೈಲಕ್ಷಣವನ್ನೂ ವಿವರಿಸಿ, ಅಗ್ನಿ-ಜ್ಯೋತಿಃ-ಅಹಃ-ಶುಕ್ಲಪಕ್ಷ-ಉತ್ತರಾಯಣ ಇವುಗಳಲ್ಲಿ ಉತ್ಕ್ರಾಂತಿಯಂ ಪಡೆದವರು ಅಪುನರಾವೃತ್ತಿಯಿಂದ ಪರಬ್ರಹ್ಮ ಸಾನ್ನಿಧ್ಯವಂ ಹೊಂದುವರೆಂತಲೂ, ಧೂಮ-ರಾತ್ರಿ-ಕೃಷ್ಣಪಕ್ಷ-ದಕ್ಷಿಣಾಯನ ಇವುಗಳಲ್ಲಿ ಉತ್ಕ್ರಾಂತರು ಪುನರಾವೃತ್ತಿಯಂ ಹೊಂದುವರೆಂತಲೂ ಹೇಳಿ, ಇವುಗಳನ್ನೆಲ್ಲಾ ತಿಳಿದ ಜ್ಞಾನಿಯು ಉತ್ಕೃಷ್ಟವಾದ ಆದಿಸ್ಥಾನವನ್ನು ಪಡೆಯುವನೆಂತಲೂ ಬೋಧಿಸಿದನು.

೯. **ನವಮಾಧ್ಯಾಯದ ಸಾರಾಂಶ**—(ರಾಜವಿದ್ಯಾರಾಜ ಗುಹ್ಯಯೋಗ)—ಶ್ರೀ ಕೃಷ್ಣ ಭಗವಂತನು ಅರ್ಜುನನನ್ನು ಕುರಿತು ಭಕ್ತಿಯೋಗವನ್ನು ಉಪದೇಶಿಸುವ ಕ್ರಮ—“ ಎಲೈ ಅರ್ಜುನನೇ ! ನೀನು ಅಸೂಯಾರಹಿತನಾದುದರಿಂದ ನಿನಗೆ ವಿಜ್ಞಾನಸಹಿತವಾದ ಭಕ್ತಿರೂಪ ಜ್ಞಾನವನ್ನು ಮೋಕ್ಷಪ್ರಾಪ್ತಿಗಾಗಿ ಉಪದೇಶಿಸುತ್ತೇನೆ ಕೇಳು. ರಾಜವಿದ್ಯೆ-ರಾಜಗುಹ್ಯ ಎಂಬ ವಿದ್ಯೆಗಳೊಳು ಶ್ರೇಷ್ಠವಾಗಿಯೂ ರಹಸ್ಯಗಳೊಳು ಶ್ರೇಷ್ಠವಾಗಿಯೂ ಇರುವ ಇದು ಪವಿತ್ರವಾಗಿಯೂ, ಉತ್ತಮವಾಗಿಯೂ, ಪ್ರತ್ಯಕ್ಷವೇದ್ಯವಾಗಿಯೂ, ಧರ್ಮ್ಯಯುಕ್ತವಾಗಿಯೂ, ಸುಖಜನಕವಾಗಿಯೂ, ಅಕ್ಷಯವಾಗಿಯೂ ಇದೆ. (ಇದರಲ್ಲಿ ವಿಶ್ವಾಸವಿಲ್ಲದವರು ಮೃತ್ಯುಸಂಸಾರವಶ್ಯರಾಗ್ಯುವರು.) ಅವ್ಯಕ್ತಮೂರ್ತಿಯಾದ ನನ್ನಿಂದಲೇ ಸರ್ವಜಗತ್ತೂ ವ್ಯಾಪ್ತವಾಗಿದೆ. ಸರ್ವಭೂತಗಳಿಗೂ ನಾನೇ ಶರೀರಿಯಾಗಿದೇನೆ. ನನ್ನ

ಈಶ್ವರತ್ವಸೂಚಕವಾದ ಯೋಗವನ್ನು ನೋಡು. ನಾನೇ ಸರ್ವ ಭೂತಗಳಿಗೂ ಆಧಾರಕನೂ ನಿಯಾಮಕನೂ ಆಗಿದೇನೆ.” ಈ ಪ್ರಕಾರ ಬೋಧಿಸುತ್ತ ಶ್ರೀಕೃಷ್ಣನು ತಾನೇ ಕಲ್ಪಾಂತದಲ್ಲಿ ಸರ್ವ ಲೋಕಗಳನ್ನೂ ತನ್ನಲ್ಲಿ ಸೇರಿಸಿಕೊಂಡು ಪುನಃ ಕಲ್ಪಾದಿಯಲ್ಲಿ ಸೃಷ್ಟಿಸುತ್ತಾನೆಂತಲೂ, ಹೀಗೆ ಮಾಡಿದಾಗ್ಯೂ ತನಗೆ ಕರ್ಮ ಸಂಬಂಧವಿಲ್ಲವೆಂತಲೂ, ತಾನು ಅಧ್ಯಕ್ಷನಾಗಿರುವುದರಿಂದ ಪ್ರಕೃತಿಯೇ ಚರಾಚರ ಪ್ರಪಂಚೋತ್ಪತ್ತಿಯಂ ಮಾಡುತ್ತದೆಯೆಂತಲೂ ಹೇಳಿ—“ನನ್ನನ್ನು ಮೂಢರು ಸಾಮಾನ್ಯಮನುಷ್ಯನೆಂದು ಭಾವಿಸಿ ನನ್ನ ಪರತ್ವವಂ ತಿಳಿಯದೆ ತಿರಸ್ಕರಿಸುತ್ತಾರೆ. ಆದರೂ ಆಸುರ ಪ್ರಕೃತಿಗಳು ದೈವಪ್ರಕೃತಿಯುಳ್ಳ ಕೆಲವು ಮಂದಿ ಮಹಾತ್ಮರು ಅನನ್ಯಚಿತ್ತರಾಗಿ ನನ್ನನ್ನೇ ಭಜಿಸಿ ನನ್ನ ಮಹಾತ್ಮ್ಯವನ್ನು ಸ್ವಲ್ಪ ಮಟ್ಟಿಗೆ ನನ್ನ ಅನುಗ್ರಹದಿಂದ ತಿಳಿಯುತ್ತಾರೆ.” ಎಂದು ಹೇಳಿ, ಅನಂತರ ನಿತ್ಯಯೋಗಕಾಮರಾದ ಭಕ್ತರ ಉಪಾಸನ ಪ್ರಕಾರವನ್ನೂ, ಜ್ಞಾನ ಯಜ್ಞ ನಿರತರ ಉಪಾಸನ ಕ್ರಮವನ್ನೂ, ತನ್ನ ವಿಶ್ವಶರೀರಕತ್ವವನ್ನೂ, ತಾನೇ ಜಗತ್ತಿಗೆ ಮಾತಾಪಿತ್ರಾದಿ ಸರ್ವವಿಧ ಬಂಧುವೆಂಬುದನ್ನೂ, ತಾನೇ ಸೃಷ್ಟಿಸ್ಥಿತಿಲಯಕರ್ತನೆಂಬುದನ್ನೂ, ತ್ರೈವಿದ್ಯರು ಯಜ್ಞಾದಿಕರ್ಮಗಳಿಂದ ಸ್ವರ್ಗಾದಿ ಪ್ರಾಪ್ತಿಯಂ ಪಡೆದು ಕ್ರಮೇಣ ಕ್ಷೀಣಪುಣ್ಯರಾಗಿ ಮರ್ತ್ಯಲೋಕಕ್ಕೆ ಪುನಃ ಬರುವರೆಂಬುದನ್ನೂ ವಿವರಿಸಿ—“ಯಾರು ಅನನ್ಯಚಿತ್ತರಾಗಿ ನನ್ನನ್ನೇ ಉಪಾಸಿಸುತ್ತಾರೋ ಅಂತಹ ನಿತ್ಯಾಭಿಯುಕ್ತರ ಯೋಗ ಕ್ಷೇಮವನ್ನು ನಾನೇ ವಹಿಸುತ್ತೇನೆ.”—ಎಂದು ಹೇಳಿ, ಇತರ ದೇವತಾಭಜನಮಾಡುವವರು ಅಲ್ಪ ಫಲವಂ ಪಡೆದು ಕೆಳಗೆ ಬೀಳುವರೆಂಬುದನ್ನೂ, ತನ್ನ ಭಕ್ತರಲ್ಲಿ ತನಗೆ ಇರುವ ಪ್ರೀತಿವಿಶೇಷವನ್ನೂ, ಭಗವದರ್ಪಣಪ್ರಕಾರವನ್ನೂ, ತನ್ನ ಸರ್ವಭೂತಸುಹೃತ್ವವನ್ನೂ, ತನ್ನ ಭಕ್ತರಿಗೆ ಎಂದಿಗೂ ಚ್ಯುತಿಯಿಲ್ಲವೆಂಬುದನ್ನೂ ವರ್ಣಿಸಿ—

“ನೀನು ನನ್ನಲ್ಲೇ ಮನಸ್ಸನ್ನು ಇಟ್ಟು ನನ್ನಲ್ಲೇ ಭಕ್ತಿನಿಷ್ಠನಾಗಿ ನನ್ನನ್ನೇ ಆರಾಧಿಸುತ್ತ ನನ್ನನ್ನೇ ನಮಸ್ಕರಿಸಿ ನನ್ನಲ್ಲೇ ಆತ್ಮಸಮರ್ಪಣವಂ ಮಾಡು; ನನ್ನ ಸಾನ್ನಿಧ್ಯವನ್ನೇ ಹೊಂದಿ ಕೃತಾರ್ಥನಾಗುವಿ”—ಎಂದು ಬೋಧಿಸಿದನು.

೧೦. **ದಶಮಾಧ್ಯಾಯದ ಸಾರಾಂಶ**—(ವಿಭೂತಿವಿಸ್ತರಯೋಗ)—ಶ್ರೀ ಕೃಷ್ಣನು ಈ ಅಧ್ಯಾಯದಲ್ಲಿ ಭಗವದ್ಭಕ್ತಿಜನಕವಾದ ಭಗವನ್ಮಹಾತ್ಮ್ಯವನ್ನೂ ಸರ್ವಜಗಚ್ಛರೀರಕತ್ವವನ್ನೂ ವರ್ಣಿಸುತ್ತಾನೆ. “ಎಲೈ ಅರ್ಜುನನೇ! ಕೇಳು, ನಿನಗೆ ಹಿತೋಪದೇಶವಂ ಮಾಡುವೆನು. ನನ್ನ ಪ್ರಭಾವವನ್ನು ಯಾವ ದೇವತೆಗಳೂ ಯಾವ ಮಹರ್ಷಿಗಳೂ ತಿಳಿಯರು. ನಾನೇ ಸರ್ವದೇವತೆಗಳಿಗೂ ಸರ್ವಮಹರ್ಷಿಗಳಿಗೂ ಕಾರಣಭೂತನು. ನನ್ನನ್ನು ತಿಳಿದವನು ಸರ್ವಪಾಪವಿನಿರ್ಮುಕ್ತನಾಗುವನು. ನನ್ನಿಂದಲೇ ನಾನಾ ವಿಧವಾದ ಬುದ್ಧಿ-ಜ್ಞಾನ-ಅಸಮ್ಮೋಹ-ಕ್ಷಮಾ-ಸತ್ಯ-ದಮ-ಶಮ-ಸುಖ-ದುಃಖ-ಭವ-ಅಭಾವ-ಭಯ-ಅಭಯ-ಅಹಿಂಸಾ-ಸಮತಾ-ತುಷ್ಟಿ-ಕೃಪಃ-ದಾನ-ಯಶಃ-ಅಯಶಃ:—ಎಂಬೀ ಸಕಲಭಾವಗಳೂ ಎಲ್ಲರಿಗೂ ಉಂಟಾಗುವುವು. ಸಪ್ತಮಹರ್ಷಿಗಳೂ ನಾಲ್ಕು ಮನುಗಳೂ ನನ್ನ ಸಂಕಲ್ಪಾನುಗುಣವಾಗಿಯೇ ಇದ್ದು ಸರ್ವಪ್ರಜಾಸೃಷ್ಟಿಗೂ ಕಾರಣಭೂತರಾದರು. ಈ ನನ್ನ ವಿಭೂತಿಯೋಗವನ್ನು ತಿಳಿದವನಿಗೆ ದೃಢವಾದ ಭಕ್ತಿನಿಷ್ಠೆಯುಂಟಾಗುವುದು.”—ಈ ಪ್ರಕಾರ ಹೇಳಿ ಭಕ್ತಿವೃದ್ಧಿಯಕ್ರಮವನ್ನೂ ವಿವರಿಸಿ, ನಾನೇ ಅಂತಹ ಬುದ್ಧಿಯೋಗವನ್ನು ಭಕ್ತರಿಗೆ ಅನುಗ್ರಹಿಸುವುದಾಗಿಯೂ ತಿಳಿಸಿದನು.

ಅನಂತರ ಅರ್ಜುನನು “ನಿನ್ನ ವಿಭೂತಿಯೋಗವನ್ನು ನಾನು ವಿಸ್ತರೇಣ ಕೇಳಲು ಕುತೂಹಲಿಯಾಗಿದ್ದೇನೆ. ನಿನ್ನನ್ನು ಹೇಗೆ ಚಿಂತಿಸಿ ನಾನು ಕೃತಾರ್ಥನಾಗುವೆನೋ ಅದನ್ನು ವಿಶದವಾಗಿ ತಿಳಿಸು” ಎಂದು ಪ್ರಾರ್ಥಿಸಿದನು. ಆಗ ಶ್ರೀ ಕೃಷ್ಣನು ತಾನೇ

ಸರ್ವಭೂತಾಂತರಾತ್ಮನಾಗಿಯೂ ಆದಿಮಧ್ಯಾಂತರೂಪಿಯಾಗಿ ಆದಿತ್ಯರಲ್ಲಿ ವಿಷ್ಣುವಾಗಿಯೂ, ಜ್ಯೋತಿರ್ಮಯ ವಸ್ತುಗಳಲ್ಲಿ ರವಿಯಾಗಿ ಯೂ ಮರುದ್ಗಣದಲ್ಲಿ ಮರೀಚಿಯಾಗಿಯೂ, ನಕ್ಷತ್ರಗಳಿಗೆ ಪತಿಯಾದ ಚಂದ್ರನಾಗಿಯೂ, ವೇದಗಳಲ್ಲಿ ಸಾಮವೇದವಾಗಿಯೂ, ಈ ಪ್ರಕಾರ ಸರ್ವವಸ್ತುಗಳಲ್ಲಿಯೂ ಶ್ರೇಷ್ಠಾಂಶವು ತಾನೇ ಯೆಂದು ಆಯಾವಸ್ತುಗಳ ನಾಮನಿರ್ದೇಶದಿಂದ ನಿರೂಪಿಸಿ, "ಯಾವ ಯಾವ ವಸ್ತುವು ವಿಭೂತಿಯುಕ್ತವಾಗಿಯೂ ಕಾಂತಿವಿಶಿಷ್ಟವಾಗಿಯೂ ಊರ್ಜಿತವಾಗಿಯೂ, ಇದೆಯೋ ಅದೆಲ್ಲವೂ ನನ್ನ ತೇಜೋಽಂಶದಿಂದ ಉತ್ಪನ್ನವಾದುದು. ನನ್ನ ಏಕಾಂಶದಿಂದಲೇ ಸರ್ವಲೋಕಗಳನ್ನೂ ನಾನೇ ಧರಿಸಿರುತ್ತೇನೆ."—ಎಂದು ವಿವರಿಸಿದನು.

೧೧. **ಏಕಾದಶಾಧ್ಯಾಯದ ಸಾರಾಂಶ**—(ವಿಶ್ವರೂಪ ಸಂದರ್ಶನಯೋಗ)—ಈ ಅಧ್ಯಾಯದಲ್ಲಿ ಅರ್ಜುನನಿಗೆ ಮೋಹ ಶಾಂತಿಯಾಗಿ ತನ್ನಲ್ಲಿ ವಿಶ್ವಾಸವುಂಟಾಗುವುದಕ್ಕೋಸ್ಕರ ತನ್ನ ವಿಶ್ವರೂಪವನ್ನು ಶ್ರೀ ಕೃಷ್ಣನು ತೋರಿಸುತ್ತಾನೆ.

ಅರ್ಜುನನು—"ನಿನ್ನ ಈಶ್ವರತ್ವಕ್ಕೆ ಅಸಾಧಾರಣವಾದ ರೂಪವನ್ನು ನೋಡಲು ಅಪೇಕ್ಷಿಸುತ್ತೇನೆ. ನನಗೆ ಅದು ನೋಡಲು ಶಕ್ಯವಾದರೆ ತೋರಿಸು" ಎಂದು ಪ್ರಾರ್ಥಿಸುತ್ತಾನೆ. ಅರ್ಜುನನಿಗೆ ದಿವ್ಯ ದೃಷ್ಟಿಯಂ ಕೊಟ್ಟು ವಸುರುದ್ರಾದಿತ್ಯಾದಿ ಸರ್ವ ದೇವಗಣಾದಿ ವಿಶಿಷ್ಟವಾದ ತನ್ನ ವಿಶ್ವರೂಪವನ್ನು ತೋರಿಸಿದನು. ಆಗ ಶ್ರೀ ಕೃಷ್ಣನು ಆ ಅತ್ಯದ್ಭುತವಾದ ರೂಪವು ಅನೇಕ ವಕ್ತ್ರನೇತ್ರಾದಿಗಳಿಂದ ಕೂಡಿ ಅನೇಕ ದಿವ್ಯಾಭರಣ ದಿವ್ಯಾಯುಧ ದಿವ್ಯಮಾಲ್ಯಾಂಬರ ದಿವ್ಯಗನ್ಧಾನುಲೇಪನ ಯುಕ್ತವಾಗಿ ವಿಶ್ವತೋಮುಖವಾಗಿ ಪ್ರಕಾಶಿಸಿತು. ಅನೇಕ ಕೋಟಿ ಸಹಸ್ರಸೂರ್ಯರು ಏಕದಾ ಪ್ರಕಾಶಿಸುವಂತೆ ಆ ದಿವ್ಯರೂಪದ ಕಾಂತಿಯು ಪ್ರಕಾಶಿಸುತ್ತಿದ್ದಿತು. ಆಗ ಅರ್ಜುನನು ದೇವದೇವನಾದ ಶ್ರೀಕೃಷ್ಣನ ಶರೀರದಲ್ಲೇ ಸರ್ವಲೋಕ

ಗಳನ್ನೂ ಬೇರೆಬೇರೆ ವಿಧವಾಗಿರುವಂತೆ ಕಂಡನು ಆಗ ವಿಸ್ಮಯಾ ವಿಷ್ಟನಾಗಿರೋಮಾಂಚವುಳ್ಳವನಾಗಿ ಅರ್ಜುನನು ಸಾಷ್ಟಾಂಗ ಪ್ರಣಾಮವಂ ಮಾಡಿ ಆ ಅತ್ಯದ್ಭುತವಾದ ದಿವ್ಯರೂಪವನ್ನು ವರ್ಣಿಸಲಾರಂಭಿಸಿದನು. ತಾನು ಕ್ರಮೇಣ ನಾನಾದೇವ ಗಂಧರ್ವಯಕ್ಷ ರಾಕ್ಷಸ ಸಿದ್ಧಸಂಘಾದಿಗಳನ್ನೂ ಅನೇಕ ಚರಾಚರ ಪ್ರಪಂಚಗಳನ್ನೂ ಶ್ರೀಕೃಷ್ಣನ ಶರೀರದಲ್ಲೇ ನೋಡಿ ಅವನ ವಕ್ತ್ರದಲ್ಲಿ ಪ್ರಕಾಶಿಸುವ ಧೃತರಾಷ್ಟ್ರ ಪುತ್ರಾದಿಗಳನ್ನೂ ಭೀಷ್ಮ ದ್ರೋಣಾದಿಗಳನ್ನೂ ನೋಡಿದನು. ಈ ಘೋರ ರೂಪವನ್ನು ನೋಡಿ—'ಇಂತಹ ಉಗ್ರರೂಪವನ್ನು ಧರಿಸಿರುವ ನೀನು ಯಾರು?' ಎಂದು ಕೇಳಿದನು. ಆಗ ಶ್ರೀಕೃಷ್ಣನು—'ನಾನು ಕಾಲಸ್ವರೂಪಿಯಾಗಿ ಲೋಕಕ್ಷಯಕಾರಿಯಾಗಿದ್ದೇನೆ. ಇದೋ ನೋಡು, ನಾನು ನಿನ್ನ ಶತ್ರುಗಳನ್ನೆಲ್ಲಾ ಧ್ವಂಸಮಾಡಿರುತ್ತೇನೆ—ನನ್ನ ಸಂಕಲ್ಪದಿಂದ ಎಲ್ಲರೂ ಹತರಾಗಿಯೇ ಇದಾರೆ. ನೀನು ನಿಮಿತ್ತ ಮಾತ್ರಕ್ಕೆ ಯುದ್ಧಮಾಡು. ನಿನಗೆ ಜಯವುಂಟಾಗುವುದು ಶೋಕವನ್ನು ಬಿಡು ಎದ್ದು ಯುದ್ಧ ಮಾಡಿ ಕೀರ್ತಿಯಂ ಪಡೆ' ಎಂದು ಬೋಧಿಸಿದನು. ಅನಂತರ ಅರ್ಜುನನು ನಮಸ್ಕರಿಸಿ ಕೃತಾಂಜಲಿಯಾಗಿ ನಡುಗುತ್ತ ಭೀತಭೀತನಾಗಿ ಗದ್ಗದ ಸ್ವರದೊಡನೆ ನಾನಾ ಪ್ರಕಾರಗಳಿಂದ ಸ್ತೋತ್ರಮಾಡುತ್ತ, ತನ್ನ ಸಾಹಸೋಕ್ತಿ ಮುಂತಾದ ಅಪರಾಧಗಳನ್ನೆಲ್ಲಾ ಕ್ಷಮಿಸಬೇಕೆಂದು ಪ್ರಾರ್ಥಿಸಿ, 'ನಿನ್ನ ಈ ಘೋರರೂಪವನ್ನು ನೋಡಿ ನಾನು ಅತಿ ಭೀತನಾಗಿದೇನೆ. ನಿನ್ನ ಸೌಮ್ಯವಾದ ಪೂರ್ವರೂಪವನ್ನೇ ಧರಿಸಿ ನನಗೆ ದರ್ಶನವಂ ಕೊಡು' ಎಂದು ಬೇಡಿಕೊಂಡನು. ಆಗ ಶ್ರೀಕೃಷ್ಣನು ತನ್ನ ಕಿರೀಟಗದಾಚಕ್ರಾದಿ ಸಹಿತವಾದ ಚತುರ್ಭುಜ ಯುಕ್ತವಾದ ಸೌಮ್ಯರೂಪವನ್ನೇ ಪುನಃ ತೋರಿಸಲು ಅರ್ಜುನನು ಮನಸ್ಸಮಾಧಾನವಂ ಹೊಂದಿ ಸಂತುಷ್ಟನಾದನು. ಶ್ರೀ ಕೃಷ್ಣನು ಅದ್ಭುತವಾದ ತನ್ನ ವಿಶ್ವರೂಪವನ್ನು ದೇವತೆಗಳೂ

ಕೂಡ ನೋಡಲಾರರು. ನಿನಗೆ ನಾನು ಪ್ರಸನ್ನನಾಗಿ ತೋರಿಸಿದೆನು. ಯಾವನು ಸಂಗವರ್ಜಿತನಾದ ಭಕ್ತೋತ್ತಮನಾಗಿ ನನ್ನ ಕೈಂಕರ್ಯವಂ ಮಾಡುತ್ತ ಸರ್ವಭೂತ ಸುಹೃತ್ತಾಗುವನೋ ಅವನೇ ನನ್ನನ್ನು ಹೊಂದುವನು.'—ಎಂದು ಉಪದೇಶಿಸಿದನು.

೧೨. **ದ್ವಾದಶಾಧ್ಯಾಯದ ಸಾರಾಂಶ**—(ಭಕ್ತಿಯೋಗ) —(ಈ ಅಧ್ಯಾಯದಲ್ಲಿ—ಆತ್ಮೋಪಾಸನಕ್ಕಿಂತ ಭಗವದುಪಾಸನ ರೂಪವಾದ ಭಕ್ತಿಯೋಗವೇ ಶೀಘ್ರಫಲಪ್ರದವಾಗಿಯೂ ಸುಖಜನಕ ವಾಗಿಯೂ ಇರುವುದರಿಂದ ಶ್ರೇಷ್ಠವಾದುದೆಂದು ವಿವರಿಸಲ್ಪಡುತ್ತದೆ).

**ಅರ್ಜುನನ ಪ್ರಶ್ನೆ**:—"ನಿನ್ನನ್ನೇ ಉಪಾಸನಮಾಡುವ ಭಕ್ತರಿಗೂ ಆತ್ಮೋಪಾಸಕರಾದ ಕೈವಲ್ಯ ನಿಷ್ಠರಿಗೂ ತಾರತಮ್ಯ ವೇನು? ಯಾರಿಗೆ ಜಾಗ್ರತೆಯಾಗಿ ಫಲಸಿದ್ಧಿಯಾಗುವುದು? ಯಾರು ಯೋಗವಿತ್ತಮರು?"

**ಶ್ರೀ ಕೃಷ್ಣನ ಉತ್ತರ**:—"ಯಾರು ನನ್ನನ್ನೇ ಆಶ್ರಯಿಸಿ ಉಪಾಸನಮಾಡುತ್ತಾರೋ ಅವರೇ ಯೋಗವಿತ್ತಮರು. ಅವರೇ ಶ್ರೇಷ್ಠರು, ಯಾರು ಅಕ್ಷರಾವ್ಯಕ್ತಶಬ್ದವಾಚ್ಯವಾದ ಜೀವಾತ್ಮ ಸ್ವರೂಪವನ್ನೇ ಉಪಾಸನಮಾಡುತ್ತಾರೋ ಅವರಿಗೆ ಕ್ಲೇಶವು ಅಧಿಕ ವಾಗಿರುವುದು; ಮತ್ತು ದೇಹಾತ್ಮಾಭಿಮಾನದಿಂದ ದುಃಖವೇ ಪ್ರಬಲವಾಗಿ ಫಲವು ದುರ್ಲಭವಾಗಿಯೇ ಕಾಣುವುದು. ನನ್ನನ್ನೇ ಆಶ್ರಯಿಸಿ ನನ್ನಲ್ಲೇ ಸರ್ವಕರ್ಮ ಸಮರ್ಪಣವನ್ನೂ ಮಾಡಿ ಅನನ್ಯ ಚಿತ್ತರಾಗಿರುವವರನ್ನು ನಾನು ಸಂಸಾರ ಸಾಗರದಿಂದ ಉದ್ಧಾರ ಮಾಡುತ್ತೇನೆ. ನೀನು ನನ್ನಲ್ಲೇ ಮನಸ್ಸನ್ನು ಇಟ್ಟು ದೃಢಾಧ್ಯವಸಾಯವುಳ್ಳವನಾಗು. ಹಾಗೆ ಮಾಡಲು ಅಶಕ್ತನಾದರೆ ಅಭ್ಯಾಸ ಯೋಗದಿಂದ ನನ್ನನ್ನು ಭಜಿಸು. ಅದಕ್ಕೂ ಅಸಮರ್ಥನಾದರೆ ನನ್ನ ಕೈಂಕರ್ಯರೂಪವಾದ ಕರ್ಮಗಳನ್ನು ಆಚರಿಸು. ಅದಕ್ಕೂ ಅಶಕ್ತನಾದರೆ ಸರ್ವ ಕರ್ಮಫಲತ್ಯಾಗವಂ ಮಾಡು. ಅಭ್ಯಾಸಕ್ಕಿಂತ

ಜ್ಞಾನವೂ ಜ್ಞಾನಕ್ಕಿಂತ ಧ್ಯಾನವೂ ಧ್ಯಾನಕ್ಕಿಂತ ಕರ್ಮಫಲತ್ಯಾಗವೂ ಶ್ರೇಷ್ಠವಾದುದು." ಇತ್ಯಾದಿ ಪ್ರಕಾರಗಳಿಂದ ಶ್ರೀ ಕೃಷ್ಣನು ಉಪದೇಶಿಸುತ್ತ ಫಲಸಂಗತ್ಯಾಗಿಯಾದ ಕರ್ಮನಿಷ್ಠನ ಗುಣಗಳನ್ನೆಲ್ಲಾ ವಿವರಿಸಿ, ಅಂತಹ ಅಧಿಕಾರಿಯೇ ತನಗೆ ಪ್ರಿಯತಮನೆಂದು ನಿರೂಪಿಸಿದನು.

## ತೃತೀಯ ಷಟ್ಕ

೧೩. **ತ್ರಯೋದಶಾಧ್ಯಾಯದ ಸಾರಾಂಶ**—(ಕ್ಷೇತ್ರ-ಕ್ಷೇತ್ರಜ್ಞ-ವಿಭಾಗಯೋಗ)—(ತೃತೀಯ ಷಟ್ಕದಲ್ಲಿ—ಪೂರ್ವಷಟ್ಕದ್ವಯಾರ್ಥಗಳ ಪರಿಶೋಧನವಂ ಮಾಡಿ ಕರ್ಮ-ಜ್ಞಾನ-ಭಕ್ತಿ-ಸಹಕೃತವಾದ ಪ್ರಪತ್ತಿಯೋಗವು ನಿರೂಪಿಸಲ್ಪಡುತ್ತದೆ.)

ತ್ರಯೋದಶಾಧ್ಯಾಯದಲ್ಲಿ ಕ್ಷೇತ್ರವೆಂಬ ಶರೀರಕ್ಕೂ ಕ್ಷೇತ್ರಜ್ಞನೆಂಬ ಶರೀರಿಗೂ ಇರುವ ಭೇದವು ವಿವರಿಸಲ್ಪಡುತ್ತದೆ.

ಶ್ರೀ ಕೃಷ್ಣನು ಅರ್ಜುನನನ್ನು ಕುರಿತು ಹೇಳುತ್ತಾನೆ-" ಸರ್ವಕ್ಷೇತ್ರಗಳಲ್ಲೂ ಕ್ಷೇತ್ರಜ್ಞನಾಗಿ ನಾನೇ ನಿಂತಿದೇನೆ. ಪರಮಾತ್ಮನಾದ ನಾನೇ ಕ್ಷರಾಕ್ಷರ ರೂಪವಾದ ಪ್ರಕೃತಿ ಪುರುಷರಿಗೆ ಶರೀರಿಯಾಗಿರುವುದರಿಂದ ಚರಾಚರ ಪ್ರಪಂಚವೆಲ್ಲಾ ನನಗೆ ಶರೀರವಾಗಿರುವುದು. ಮಹಾಭೂತಗಳು-ಅಹಂಕಾರ-ಬುದ್ಧಿ-ಅವ್ಯಕ್ತ-ಏಕಾದಶೇಂದ್ರಿಯಗಳು-ಶಬ್ದ ಸ್ಪರ್ಶರೂಪರಸಗಂಧಗಳು-ಇಚ್ಛಾ-ದ್ವೇಷ-ಸುಖ-ದುಃಖ-ಇತ್ಯಾದಿ ವಿಕಾರಗಳುಳ್ಳ ಭೂತ ಸಂಘಾತವೇ (ಚೇತನನಿಗೆ ಶರೀರವಾಗಿ) ಕ್ಷೇತ್ರವೆಂದು ಕರೆಯಲ್ಪಡುತ್ತದೆ. ಕ್ಷೇತ್ರಕಾರ್ಯಗಳಲ್ಲಿ ಆತ್ಮಜ್ಞಾನಕ್ಕೆ ಸಾಧನವಾದ ಗುಣಗಳು ಅಮಾನಿತ್ವ, ಅದಂಭಿತ್ವ, ಅಹಿಂಸಾ, ಕ್ಷಾಂತಿ, ಆರ್ಜವ, ಆಚಾರ್ಯೋಪಾಸನ, ಶುಚಿತ್ವ, ಸ್ಥೈರ್ಯ, ಆತ್ಮನಿಗ್ರಹ, ವೈರಾಗ್ಯ, ಅನಹಂಕಾರ, ದುಃಖದೋಷಾನುದರ್ಶನ, ಅಸಕ್ತಿ, ಅನಭಿಷ್ವಂಗ, ಸಮಚಿತ್ತತ್ವ, ಸ್ಥಿರ

ಭಕ್ತಿ, ವಿವಿಕ್ತದೇಶಸೇವನ, ಜನಸಂಗತ್ಯಾಗ, ಅಧ್ಯಾತ್ಮಜ್ಞಾನ ನಿತ್ಯತ್ವ, ತತ್ತ್ವಜ್ಞಾನಾರ್ಥ ಚಿಂತನೆ—ಈ ಗುಣಗಳ ಸಮುದಾಯವೇ ಜ್ಞಾನವೆಂದು ಕರೆಯಲ್ಪಡುತ್ತದೆ; ಏತದ್ವ್ಯತಿರಿಕ್ತವಾದುದು ಆತ್ಮಜ್ಞಾನ ವಿರೋಧಿಯಾದುದರಿಂದ ಅಜ್ಞಾನವೆಂದು ಕರೆಯಲ್ಪಡುತ್ತದೆ."

ಈ ಪ್ರಕಾರ ಬೋಧಿಸುತ್ತ ಜೀವಾತ್ಮಸ್ವರೂಪವನ್ನೂ ಕ್ರಮೇಣ ವಿವರಿಸಿ, ಜೀವಾತ್ಮನೇ ಪ್ರಕೃತಿಸಂಸರ್ಗದಿಂದ ಸುಖದುಃಖ ಭೋಕ್ತಾ—ಎಂದು ಹೇಳಿ, ಈ ಕ್ಷೇತ್ರ-ಕ್ಷೇತ್ರಜ್ಞ-ವಿಭಾಗವಂ ತಿಳಿದವನು ಕರ್ಮನಿರ್ಲಿಪ್ತನಾಗಿ ಆತ್ಮಜ್ಞಾನಸಂಪನ್ನನಾಗಿ ಉಜ್ಜೀವಿಸುವನೆಂದು ಉಪದೇಶಿಸಿದನು.

೧೪. **ಚತುರ್ದಶಾಧ್ಯಾಯದ ಸಾರಾಂಶ**—(ಗುಣತ್ರಯ ವಿಭಾಗಯೋಗ). ಶ್ರೀ ಕೃಷ್ಣನು ಪುನಃ ಉಪದೇಶಿಸುವ ಕ್ರಮ—"ಜ್ಞಾನಗಳೊಳು ಶ್ರೇಷ್ಠವಾದ ಜ್ಞಾನವನ್ನು ಪುನಃ ಹೇಳುತ್ತೇನೆ ಕೇಳು. ಈ ಜ್ಞಾನವನ್ನು ಪಡೆದವರು ನನ್ನ ಸಾಧರ್ಮ್ಯವನ್ನು ಹೊಂದಿ ಮುಕ್ತರಾಗುವರು. ನನ್ನ ಬ್ರಹ್ಮಶಬ್ದವಾಚ್ಯವಾದ ಪ್ರಕೃತಿಯಲ್ಲಿ ನಾನೇ ಗರ್ಭಧಾರಣಮಾಡಿ ಸರ್ವಭೂತೋತ್ಪತ್ತಿಯಂ ಮಾಡುತ್ತೇನೆ. ನಾನೇ ಆ ಪ್ರಕೃತಿಯಲ್ಲಿ ಬೀಜಪ್ರದನಾದ ಪಿತಾ. ಪ್ರಕೃತಿಯ ಗುಣಗಳು ಮೂರು—ಸತ್ವ, ರಜಃ, ತಮಃ. ಈ ಗುಣಗಳೇ ಜೀವಾತ್ಮನನ್ನು ದೇಹದಲ್ಲಿ ಬಂಧಿಸುತ್ತವೆ. ಸತ್ವ ಗುಣವು ನಿರ್ಮಲವಾಗಿಯೂ, ಪ್ರಕಾಶಕವಾಗಿಯೂ, ಆರೋಗ್ಯಕರವಾಗಿಯೂ, ಸುಖಸಂಗಿಯಾಗಿಯೂ, ಜ್ಞಾನಸಂಗಿಯಾಗಿಯೂ ಇದೆ. ರಜಸ್ಸು ರಾಗಾತ್ಮಕವಾಗಿ ತೃಷ್ಣಾಸಂಗಹೇತುವಾಗಿ ಪುಣ್ಯ ಪಾಪ ಕರ್ಮಗಳಲ್ಲಿ ಪ್ರವೃತ್ತಿಯನ್ನುಂಟುಮಾಡುತ್ತ ಬಂಧಜನಕವಾಗಿದೆ. ತಮಸ್ಸು ಅಜ್ಞಾನದಿಂದ ಉತ್ಪನ್ನವಾಗಿ ಮೋಹಜನಕವಾಗಿ ಪ್ರಮಾದ-ಆಲಸ್ಯ-ನಿದ್ರಾದಿಗಳಿಂದ ಚೇತನನಿಗೆ ಬಂಧಕವಾಗುತ್ತದೆ. ಹೀಗೆ ಸತ್ವವು

ಸುಖಸಂಗಿ, ರಜಸ್ಸು ಕರ್ಮಸಂಗಿ, ತಮಸ್ಸು ಮೋಹ (ವಿಪರೀತ ಜ್ಞಾನ) ಸಂಗಿ. ಈ ಗುಣಗಳು ನ್ಯೂನಾಧಿಕಭಾವದಿಂದ ತಮ್ಮ ತಮ್ಮ ಕಾರ್ಯಗಳನ್ನು ತೋರಿಸುತ್ತವೆ. ಆಯಾ ಗುಣೋದ್ರೇಕಕಾಲದಲ್ಲಿ ಮೃತರಾದವರು ಅದಕ್ಕೆ ತಕ್ಕ ಜನನ್ಮವನ್ನು ಹೊಂದುವರು. ಸತ್ವ ಗುಣದಿಂದ ಸುಕೃತಫಲವಾದ ಸುಖವೂ, ರಜೋಗುಣದಿಂದ ದುಃಖವೂ, ತಮೋಗುಣದಿಂದ ಅಜ್ಞಾನವೂ ಉಂಟಾಗುತ್ತವೆ. ಸತ್ವ ದಿಂದ ಊರ್ಧ್ವಸ್ಥಾನವೂ, ರಜಸ್ಸಿನಿಂದ ಮಧ್ಯಸ್ಥಾನವೂ, ತಮಸ್ಸಿ ನಿಂದ ಅಧೋಗತಿಯೂ ಉಂಟಾಗುವುವು. ತ್ರಿಗುಣಾತೀತನಾದ ಜೀವನ ಸ್ವರೂಪವನ್ನು ತಿಳಿದವನು ಜನ್ಮಮೃತ್ಯು ಜರಾ ದುಃಖವಿಮು ಕ್ತನಾಗಿ ಅಮೃತಸ್ವರೂಪವಾದ ಆತ್ಮಾನುಭವವಂ ಪಡೆಯುವನು.''

ಅರ್ಜುನನು ಇದನ್ನು ಕೇಳಿ--'' ತ್ರಿಗುಣಾತೀತನ ಲಕ್ಷಣ ವನ್ನೂ ಆಚಾರವನ್ನೂ ಉಪಾಯವನ್ನೂ ಚೆನ್ನಾಗಿ ತಿಳಿಸು ''— ಎಂದು ಪ್ರಶ್ನೆಮಾಡಿದನು. ಅದಕ್ಕೆ ಶ್ರೀ ಕೃಷ್ಣನು—'' ಗುಣಗ ಳಿಂದ ಅವಿಚಾಲ್ಯನಾಗಿ, ಉದಾಸೀನನಂತೆ ಇರುತ್ತ, ಸಮದುಃಖ ಸುಖನಾಗಿಯೂ, ಸ್ವಸ್ಥನಾಗಿಯೂ, ಸಮಲೋಷ್ಟಾಶ್ಮಕಾಂಚನನಾಗಿ ಪ್ರಿಯಾಪ್ರಿಯರಲ್ಲಿಯೂ, ನಿಂದಾಸ್ತುತಿಗಳಲ್ಲಿಯೂ, ಮಾನಾವಮಾನ ಗಳಲ್ಲಿಯೂ, ಮಿತ್ರಾರಿಪಕ್ಷಗಳಲ್ಲಿಯೂ ಸಮಾನನಾಗಿ ಧೀರನಾಗಿ ದೇಹಿತ್ವ ಪ್ರಯುಕ್ತವಾದ ಆರಂಭಗಳನ್ನು ತ್ಯಜಿಸಿದವನೇ ಗುಣಾ ತೀತನು. ನನ್ನನ್ನೇ ಯಾವನು ಭಕ್ತಿಯೋಗದಿಂದ ಸೇವಿಸುತ್ತಾನೋ ಅವನು ಗುಣಾತೀತನಾಗಿ ನನ್ನ ಕೃಪೆಗೆ ಪಾತ್ರನಾಗಿ ಶಾಶ್ವತ ಸುಖ ಜನಕವಾದ ಅಮೃತತ್ವವಂ ಪಡೆಯುವನು. (ಇವನೇ ಪ್ರಪನ್ನಾಧಿ ಕಾರಿಯಾಗಿ ನಿರತಿಶಯಾನಂದಶಾಲಿಯಾಗುವನೆಂದು ಭಾವವು.''

೧೫. **ಪಂಚದಶಾಧ್ಯಾಯದ ಸಾರಾಂಶ**—(ಪುರುಷೋ ತ್ತಮಯೋಗ)—ಶ್ರೀ ಕೃಷ್ಣನು ಹೇಳುವ ಕ್ರಮ—'' ಈ ಸಂಸಾರ ವೆಂಬುದು ಒಂದು ಅಶ್ವತ್ಥವೃಕ್ಷವೆಂದು ಹೇಳುವರು. ಇದು ಊರ್ಧ್ವ

ಮೂಲವಾಗಿಯೂ ಅಧಶ್ಶಾಖವಾಗಿಯೂ ಅವ್ಯಯವಾಗಿಯೂ ಇರುವುದು. ಇದರ ಪರ್ಣಗಳು ಕಾಮ್ಯಕರ್ಮವಿಧಾಯಕವಾದ ಶ್ರುತಿವಚನಗಳು. ಈ ಸಂಸಾರ ವೃಕ್ಷದ ಛೇದನೋಪಾಯವನ್ನು ವೇದಗಳಿಂದ ತಿಳಿದವನೇ **ವೇದವಿತ್** ಎಂದು ಕರೆಯಲ್ಪಡುವನು. ಯಾವನು ಅಸಂಗವೆಂಬ ಶಸ್ತ್ರದಿಂದ ಈ ವೃಕ್ಷವನ್ನು ಛೇದಿಸುತ್ತಾನೋ ಅವನು ಅಪುನರಾವೃತ್ತಿರೂಪವಾದ ಮೋಕ್ಷವನ್ನು ನನ್ನ ಮೂಲಕ ಪಡೆಯುವನು. ಆ ಮೋಕ್ಷಸ್ಥಾನವು ದಿವ್ಯಜ್ಞಾನದಿಂದ ಸರ್ವಪ್ರಕಾಶಕವಾಗಿರುವುದರಿಂದ ಅಲ್ಲಿ ಬಾಹ್ಯಜ್ಯೋತಿರ್ಮಯರಾದ ಸೂರ್ಯ ಚಂದ್ರಾಗ್ನಿ ಪ್ರಭೃತಿಗಳು ಪ್ರಕಾಶಿಸಲಾರರು. ನನ್ನ ಅಂಶಭೂತನಾದ ಜೀವನು ಪ್ರಯಾಣಕಾಲದಲ್ಲಿ ಮನಸ್ಸಿನೊಡನೆ ಕೂಡಿದ ಪಂಚೇಂದ್ರಿಯಗಳೊಂದಿಗೆ ಪ್ರಯಾಣಮಾಡುತ್ತಾನೆ. ಇಂತಹ ಜೀವನ ಸ್ವರೂಪವನ್ನು ಮೂಢರು ತಿಳಿಯಲಾರರು; ದಿವ್ಯಜ್ಞಾನ ದೃಷ್ಟಿಯುಳ್ಳವರೇ ತಿಳಿಯಬಲ್ಲರು. ನನ್ನಲ್ಲಿ ಪ್ರಪತ್ತಿಮಾಡಿದ ಜ್ಞಾನಿಗಳೇ ತಿಳಿಯಬಲ್ಲರು, ಆದಿತ್ಯ ಚಂದ್ರಾಗ್ನಿಗಳ ತೇಜಸ್ಸೂ ನನ್ನ ತೇಜಸ್ಸಿನ ಅಂಶವೇ. ನಾನೇ ಪೃಥಿವೀಧಾರಕನು, ನಾನೇ ಸೋಮನಾಗಿ ರಸಮಯನಾಗಿ ಓಷಧಿಗಳನ್ನು ಪೋಷಿಸುತ್ತೇನೆ. ನಾನೇ ವೈಶ್ವಾನರನೆಂಬ ಅಗ್ನಿಯಾಗಿ ಪ್ರಾಣಿಗಳ ದೇಹದಲ್ಲಿ ಪ್ರಾಣಾಪಾನವೃತ್ತಿ ಭೇದಗಳಿಂದ ಚತುರ್ವಿಧಾನ್ನವನ್ನೂ ಪಚನಮಾಡುತ್ತೇನೆ. ನಾನೇ ಸರ್ವರ ಹೃದಯದಲ್ಲೂ ವಾಸಮಾಡುತ್ತ ಸ್ಮೃತಿ-ಜ್ಞಾನ-ಅಪೋಹನ, ಇತ್ಯಾದಿಗಳಿಗೆ ಕಾರಣಭೂತನಾಗಿ ವೇದವೇದಾಂತಪ್ರತಿಪಾದ್ಯನಾಗಿದೇನೆ. ಕ್ಷರ-ಅಕ್ಷರವೆಂಬ ಪ್ರಕೃತಿಪುರುಷರಿಗೆ ಈಶ್ವರನಾಗಿ ಶರೀರಿಯಾಗಿರುವ ಪುರುಷೋತ್ತಮನೇ ಪರಮಾತ್ಮನು. ಆದುದರಿಂದಲೇ ನನಗೆ ಪುರುಷೋತ್ತಮನೆಂದು ಲೋಕದಲ್ಲೂ ವೇದದಲ್ಲೂ ಪ್ರಸಿದ್ಧಿಯುಂಟಾಗಿದೆ. ಈ ನನ್ನ ಪುರುಷೋತ್ತಮತ್ವವನ್ನು ತಿಳಿದವನು ಸರ್ವಜ್ಞನಾಗಿ ನನ್ನನ್ನೇ ಸರ್ವಭಾವಗಳಿಂದಲೂ ಸೇವಿ

ಸುವನು. ಈ ಗುಹ್ಯತಮವಾದ ಶಾಸ್ತ್ರವನ್ನು ತಿಳಿದವನು ವಿವೇಕಿಯಾಗಿ ಕೃತಕೃತ್ಯನಾಗುವನು.''

೧೬. **ಷೋಡಶಾಧ್ಯಾಯದ ಸಾರಾಂಶ**—(ದೈವಾಸುರಸಮ್ಪದ್ವಿಭಾಗಯೋಗ)—ಈ ಅಧ್ಯಾಯದಲ್ಲಿ ಶ್ರೀಕೃಷ್ಣನು ದೇವೀಸಮ್ಪತ್-ಆಸೂರೀಸಮ್ಪತ್--ಎಂಬೀ ಎರಡಕ್ಕೂ ತಾರತಮ್ಯವನ್ನು ವಿವರಿಸುತ್ತಾನೆ:—

"ಭಗವದಾಜ್ಞಾನುವರ್ತಿಗಳಾದ ದೇವತೆಗಳ ಸಮ್ಪತ್ತನ್ನು ಆಶ್ರಯಿಸಿ ಹುಟ್ಟಿರುವವರಲ್ಲಿ ಅಭಯ, ಸತ್ವಸಂಶುದ್ಧಿ, ಜ್ಞಾನಯೋಗನಿಷ್ಠೆ, ದಾನ, ದಮ, ಯಜ್ಞ, ಸ್ವಾಧ್ಯಾಯ, ತಪಸ್ಸು, ಆರ್ಜವ, ಅಹಿಂಸಾ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ, ಅಪೈಶುನ, ಭೂತದಯಾ, ವಿಷಯವೈರಾಗ್ಯ, ಮಾರ್ದವ, ಲಜ್ಜಾ, ಅಚಾಪಲ, ತೇಜಸ್ಸು, ಕ್ಷಮಾ, ಧೃತಿ, ಶುಚಿತ್ವ, ಅದ್ರೋಹ, ಗರ್ವರಾಹಿತ್ಯ---ಎಂಬೀಗುಣಗಳು ಪ್ರಕಾಶಿಸುವವು.

ಭಗವದಾಜ್ಞಾತಿಲಂಘಿಗಳಾದ ಅಸುರರ ಸಮ್ಪತ್ತನ್ನು ಆಶ್ರಯಿಸಿ ಹುಟ್ಟಿರುವವರಲ್ಲಿ ದಂಭ, ದರ್ಪ, ಅತಿಮಾನ, ಕ್ರೋಧ, ಪಾರುಷ್ಯ, ಅಜ್ಞಾನ-ಎಂಬೀ ದುರ್ಗುಣಗಳು ಕಾಣುವುವು

ದೈವಸಂಪತ್ತು ಮೋಕ್ಷ ಜನಕವಾಗಿರುವುದು; ಆಸುರ ಸಂಪತ್ತು ಬಂಧಜನಕವಾಗಿರುವುದು; ಭೂತಸೃಷ್ಟಿಯು ದೈವ, ಆಸುರ ಎಂದು ದ್ವಿವಿಧವಾಗಿರುವುದು. ದೈವಸೃಷ್ಟಿಯ ಪ್ರಕಾರವು ಹಿಂದೆಯೇ ನಿರೂಪಿತವಾಗಿದೆ. ಆಸುರ ಪ್ರಕೃತಿಗಳಾದವರಿಗೆ ಪ್ರವೃತ್ತಿ ನಿವೃತ್ತಿ ಭೇದವೇ ತಿಳಿಯದು. ಅವರಲ್ಲಿ ಶೌಚ, ಆಚಾರ, ಸತ್ಯ ಇವುಗಳು ಕಾಣುವುದೇ ಇಲ್ಲ. ಅವರು ಜಗತ್ತು ಅಸತ್ಯವೆಂತಲೂ, ಈಶ್ವರ ಸೃಷ್ಟವಾದುದಲ್ಲವೆಂತಲೂ, ಕಾಮಹೇತುಕವೆಂತಲೂ, ವಾದಿಸುತ್ತಾರೆ. ಇಂತಹ ದುಷ್ಟದೃಷ್ಟಿಯುಳ್ಳ ಅಲ್ಪಬುದ್ಧಿಗಳಾದ ಅವರು

ನಷ್ಟಾತ್ಮರಾಗಿ ಉಗ್ರಕೃತ್ಯಗಳಿಂದ ಲೋಕಕಂಟಕರಾಗುತ್ತಾರೆ. ಕಾಮ, ದಂಭ, ಮಾನ, ಮದ, ಮೋಹ, ಅಶುಚಿ-ಇತ್ಯಾದಿ ದುರ್ಗುಣ ಗಳಿಂದ ಕಾಮಭೋಗಕ್ಕಾಗಿ ಅನ್ಯಾಯದಿಂದ ವಿತ್ತಾರ್ಜನವನ್ನು ಮಾಡುತ್ತ ದುರಹಂಕಾರದಿಂದ ಮೆರೆಯುತ್ತ ಅನೇಕ ವಿಧ ಚಿತ್ರ ವಿಭ್ರಮದಿಂದ ಮೋಹ ಜಾಲ ಸಮಾವೃತರಾಗಿ ನರಕದಲ್ಲಿ ಬೀಳು ವರು. ಕೆಲವರು ಧನ-ಮಾನ ಮದಗಳಿಂದ ಯಜ್ಞಾದಿಕರ್ಮಗಳನ್ನು ದಂಬಾರ್ಥವಾಗಿ ಮಾಡುವರು. ತಮ್ಮ ಅಹಂಕಾರದಿಂದ ಸರ್ವಾಂತ ರ್ಯಾಮಿಯಾದ ನನ್ನಲ್ಲೂ ಅಸೂಯೆಯುಳ್ಳವರಾಗುವರು. ಇಂತಹ ದುರಾತ್ಮರಾದ ಕ್ರೂರ ನರಾಧಮರನ್ನು ನಾನು ಆಸುರಯೋನಿಗಳಲ್ಲೇ ಪುನಃ ಹಾಕಿ ಕೆಳಗೆ ತಳ್ಳುವೆನು ಇಂತಹ ಮೂಢಾತ್ಮರಾದ ಪಾಪಿ ಷ್ಠರು ಆಸುರ ಜನ್ಮಗಳುಳ್ಳವರಾಗಿ ನನ್ನನ್ನು ಹೊಂದದೆ ಅಧಮಗತಿ ಯನ್ನೇ ಹೊಂದುವರು. ಆತ್ಮನಾಶಹೇತುವಾದ ನರಕದ್ವಾರವು ಕಾಮ, ಕ್ರೋಧ, ಲೋಭ, ಎಂದು ತ್ರಿವಿಧವಾಗಿರುವುದು. ಆದುದ ರಿಂದ ಈ ದುರ್ಗುಣತ್ರಯವನ್ನೂ ಬಿಡು. ಇದನ್ನು ಬಿಟ್ಟವರಿಗೆ ಶ್ರೇಯಸ್ಸುಂಟಾಗಿ ಉತ್ಕೃಷ್ಟಗತಿಯುಂಟಾಗುವುದು. ಶಾಸ್ತ್ರವಿಧಿ ಯನ್ನು ಅತಿಕ್ರಮಿಸುವವರಿಗೆ ಯಾವ ಶ್ರೇಯಸ್ಸೂ ಉಂಟಾಗ ಲಾರದು. ಆದುದರಿಂದ ನೀನು ಶಾಸ್ತ್ರವನ್ನೇ ಪ್ರಮಾಣವಾಗಿ ಅಂಗೀಕರಿಸಿ ಸನ್ಮಾರ್ಗಪ್ರವೃತ್ತನಾಗಿ ಕೃತಾರ್ಥನಾಗು."

೧೭. **ಸಪ್ತದಶಾಧ್ಯಾಯದ ಸಾರಾಂಶ**—(ಶ್ರದ್ಧಾತ್ರಯ ವಿಭಾಗಯೋಗ)—**ಅರ್ಜುನನ ಪ್ರಶ್ನೆ** :—"ಶಾಸ್ತ್ರವಿಧಿಯನ್ನು ಬಿಟ್ಟು ಯಾರು ಶ್ರದ್ಧೆಯಿಂದ ಯಾಗಾದಿಕರ್ಮ ಪ್ರವೃತ್ತರಾಗುತ್ತಾರೋ ಅವರ ನಿಷ್ಠೆಯು ಸತ್ವಮಾರ್ಗವೇ ? ರಜೋಮಾರ್ಗವೇ ? ತಮೋ ಮಾರ್ಗವೇ ?"

**ಶ್ರೀ ಕೃಷ್ಣನ ಉತ್ತರ** :—"ಶ್ರದ್ಧೆಯು ಸ್ವಭಾವತಃ ಪ್ರಾಣಿ ಗಳಿಗೆ ತ್ರಿವಿಧವಾಗಿರುವುದು ; ಸಾತ್ವಿಕ, ರಾಜಸ ತಾಮಸ ಇವುಗಳನ್ನು

ವಿವರಿಸುವೆನು-ಕೇಳು. ಸರ್ವರಿಗೂ (ಸತ್ವವೆಂಬ) ಅಂತಃಕರಣಕ್ಕೆ ಅನುಗುಣವಾಗಿ ಶ್ರದ್ಧೆಯು ಉಂಟಾಗುವುದು. ಶ್ರದ್ಧಾಮಯನಾದ ಪುರುಷನು ಯಾವ ವಿಧವಾದ ಶ್ರದ್ಧೆಯುಳ್ಳವನೋ ಆ ವಿಧವಾದ ಫಲವನ್ನು ಪಡೆಯುವನು. ಸಾತ್ವಿಕರು ದೇವತಾರಾಧನವಂ ಮಾಡುತ್ತಾರೆ. ರಾಜಸರು ಯಕ್ಷರಾಕ್ಷಸರನ್ನು ಪೂಜಿಸುತ್ತಾರೆ. ತಾಮಸರು ಪ್ರೇತಭೂತಾದಿ ಗಣಗಳನ್ನು ಪೂಜಿಸುತ್ತಾರೆ. ಅಶಾಸ್ತ್ರವಿಹಿತವಾದ ಘೋರತಪಸ್ಸನ್ನು ಮಾಡುತ್ತ ದಂಭಾಹಂಕಾರ ಸಂಯುಕ್ತರಾಗಿ ಕಾಮರಾಗಬಲಾನ್ವಿತರಾಗಿ ಶರೀರವನ್ನೂ ಕೃಶಮಾಡಿ ಜೀವಾತ್ಮನನ್ನೂ ಕ್ಲೇಶಪಡಿಸುತ್ತಾರೋ ಅಂಥವರು ಆಸುರ ಪ್ರಕೃತಿಗಳಾದುದರಿಂದ ಅಧೋಗತಿಯನ್ನು ಹೊಂದುವರು.

ಮತ್ತು ಸರ್ವರಿಗೂ ಆಹಾರ-ಯಜ್ಞ-ತಪಸ್ಸು-ದಾನ ಎಂಬಿವುಗಳೂ ತ್ರಿವಿಧವಾಗಿರುವುವು.

**ಆಹಾರ :—**

೧. **ಸಾತ್ವಿಕಾಹಾರ** — (ಆಯುಃ-ಬಲ-ಆರೋಗ್ಯ-ಸುಖ-ಪ್ರೀತಿ ವರ್ಧಕ), ರಸ್ಯ (ಮಧುರ), ಸ್ನಿಗ್ಧ, ಸ್ಥಿರ, ಹೃದ್ಯ.

೨. **ರಾಜಸಾಹಾರ**—ಕಟು, ಅಮ್ಲ, ಲವಣ, ಅತ್ಯುಷ್ಣ, ಅತಿ ತೀಕ್ಷ್ಣ,ರೂಕ್ಷ,ವಿದಾಹಿ(ದುಃಖ-ಶೋಕ-ರೋಗ-ಜನಕ)

೩. **ತಾಮಸಾಹಾರ** — ಚಿರಕಾಲಾತೀತವಾದುದು, ನೀರಸ, ದುರ್ಗಂಧ, ಪರ್ಯುಷಿತ, ಉಚ್ಛಿಷ್ಟ, ಅಪರಿಶುದ್ಧ.

**ಯಜ್ಞ :—**

೧. **ಸಾತ್ವಿಕ ಯಜ್ಞ**—ಫಲಾಕಾಂಕ್ಷೆಯಿಲ್ಲದೆ ಶಾಸ್ತ್ರ ವಿಹಿತವಾದ ಕರ್ಮವನ್ನು ಶ್ರದ್ಧೆಯೊಡನೆ ಮಾಡೋಣ.

೨. **ರಾಜಸ ಯಜ್ಞ**—ಫಲಾಭಿಸಂಧಿಯೊಡನೆ ದಂಭಾರ್ಥವಾಗಿ ಯಶಸ್ಕಾಮನೆಯಿಂದ ಮಾಡಲ್ಪಡುವ ಯಜ್ಞ.

೩. **ತಾಮಸ ಯಜ್ಞ**—ವಿಧಿಹೀನ, ಅನುಕ್ತ ದ್ರವ್ಯಯುಕ್ತ, ಮಂತ್ರಹೀನ, ಅದಕ್ಷಿಣ, ಶ್ರದ್ಧಾರಹಿತ.

**ತಪಃ :—**

೧. **ಶಾರೀರ ತಪಸ್ಸು**—ದೇವ ದ್ವಿಜಗುರು ಪ್ರಾಜ್ಞ ಪೂಜನ, ತೀರ್ಥಸ್ನಾನಾದಿ, ಆರ್ಜವ, ಬ್ರಹ್ಮಚರ್ಯ, ಅಹಿಂಸಾ.

೨. **ವಾಚಿಕ ತಪಸ್ಸು**—ಅನುದ್ವೇಗಕರ ವಚನ,ಸತ್ಯ ಪ್ರಿಯ, ಹಿತವಚನ, ವೇದಾಭ್ಯಾಸಾದಿ ಸಚ್ಛಾಸ್ತ್ರಪಠನ.

೩. **ಮಾನಸ ತಪಸ್ಸು**—ಮನಃಪ್ರಸಾದ, ಸೌಮ್ಯತ್ವ, ಮೌನ, ಆತ್ಮನಿಗ್ರಹ (ಧ್ಯಾನ), ಭಾವಸಂಶುದ್ಧಿ.

ಸಾತ್ವಿಕ-ರಾಜಸ-ತಾಮಸ-ಎಂದೂ ತಪಸ್ಸು ತ್ರಿವಿಧವಾಗಿರುವುದು.

**ದಾನ :—**

೧. **ಸಾತ್ವಿಕ ದಾನ**—ದೇಶ-ಕಾಲ-ಪಾತ್ರಗಳನ್ನರಿತು ದಾತವ್ಯವೆಂದು ಸದ್ವಿನಿಯೋಗಯುಕ್ತವಾದ ದಾನ.

೨. **ರಾಜಸ ದಾನ**—ಪ್ರತ್ಯುಪಕಾರಾಪೇಕ್ಷೆಯಿಂದಲೋ, ಫಲೋದ್ದೇಶದಿಂದಲೋದಾನ, ಅಶುದ್ಧ ದ್ರವ್ಯದಾನ.

೩. **ತಾಮಸ ದಾನ**—ಅದೇಶ, ಅಕಾಲ, ಅಪಾತ್ರಗಳಲ್ಲಿ ಅಸತ್ಕಾರದೊಡನೆ, ಅವಜ್ಞೆಯೊಡನೆ ಕೊಡಲ್ಪಟ್ಟ ದಾನ.

ಓಂ-ತತ್-ಸತ್-ಎಂಬ ತ್ರಿವಿಧ ನಿರ್ದೇಶವುಳ್ಳವರಾಗಿ ಬ್ರಾಹ್ಮಣರೂ, ವೇದಗಳೂ, ಯಜ್ಞಗಳೂ ಪೂರ್ವಕಾಲದಲ್ಲಿ ನನ್ನಿಂದಲೇ ನಿರ್ಮಿತವಾದುವು. ಆದುದರಿಂದ ಓಂ ಎಂಬ ಪ್ರಣವದೊಡನೆ ಕೂಡಿಯೇ ಯಜ್ಞ-ದಾನ-ತಪಃ ಕ್ರಿಯೆಗಳನ್ನು ಶಾಸ್ತ್ರರೀತ್ಯಾ ಬ್ರಹ್ಮವಾದಿಗಳು ಆಚರಿಸುತ್ತಾರೆ. ವೇದಗಳೂ ಕೂಡ ಈ ಪ್ರಣವದೊಡನೆಯೇ ಆರಂಭಿಸಲ್ಪಡುತ್ತವೆ. ತತ್ ಎಂಬ ಶಬ್ದವನ್ನು ಪ್ರಯೋಗಿಸಿ ಮೋಕ್ಷಾರ್ಥಿಗಳು ಫಲಾಕಾಂಕ್ಷೆಯಿಲ್ಲದೆ ಯಜ್ಞ-ದಾನ-

ತಪಃ-ಕ್ರಿಯೆಗಳಂ ಮಾಡುತ್ತಾರೆ. ಸತ್ ಎಂಬ ಶಬ್ದವು ಸದ್ಭಾವ, ಸಾಧುಭಾವ, ಪ್ರಶಸ್ತಕರ್ಮಗಳೆಂಬ ಅರ್ಥಗಳಲ್ಲಿ ಉಪಯೋಗಿಸಲ್ಪಡುತ್ತದೆ. ಯಜ್ಞ-ತಪಃ-ದಾನ ಇವುಗಳ ನಿಷ್ಠೆಯು ಸಚ್ಛಬ್ಧವಾಚ್ಯವಾಗಿದೆ. ಆದುದರಿಂದ ವೇದಗಳೂ, ವೈದಿಕಕರ್ಮಗಳೂ, ಬ್ರಾಹ್ಮಣರೂ (ತ್ರೈವರ್ಣಿಕರೂ)—ಓಂ-ತತ್-ಸತ್ ಎಂಬ ಶಬ್ದವಾಚ್ಯರಾಗುತ್ತಾರೆ. ಅಶ್ರದ್ಧೆಯಿಂದ ಮಾಡಲ್ಪಟ್ಟ ಯಜ್ಞ-ದಾನ-ತಪಃ ಕ್ರಿಯೆಗಳೆಲ್ಲವೂ ಅಶಾಸ್ತ್ರೀಯವಾದುದರಿಂದ ಅಸಚ್ಛಬ್ದವಾಚ್ಯ(ಗರ್ಹಿತ)ವಾಗಿ ಐಹಿಕಾಮುಷ್ಮಿಕ ಫಲರಹಿತವಾಗುವುವು.

೧೮. **ಅಷ್ಟಾದಶಾಧ್ಯಾಯದ ಸಾರಾಂಶ**—(ಮೋಕ್ಷೋಪದೇಶಯೋಗ)—**ಅರ್ಜುನನ ಪ್ರಶ್ನೆ**—"ಸನ್ಯಾಸದ ತತ್ವವನ್ನೂ ತ್ಯಾಗದ ತತ್ತ್ವವನ್ನೂ ತಿಳಿಯಲಪೇಕ್ಷಿಸುತ್ತೇನೆ. ಹೇ ಹೃಷೀಕೇಶನೇ! ಇವುಗಳ ತಾರತಮ್ಯವನ್ನು ಬೇರೆಬೇರೆಯಾಗಿ ತಿಳಿಸು."

**ಶ್ರೀಕೃಷ್ಣನ ಉತ್ತರ**—"ಕಾಮ್ಯಕರ್ಮಗಳ ಸ್ವರೂಪತ್ಯಾಗವನ್ನು ಸನ್ಯಾಸವೆಂದು ಕೆಲವುಮಂದಿ ವಿದ್ವಾಂಸರು ಹೇಳುತ್ತಾರೆ. ನಿತ್ಯ-ನೈಮಿತ್ತಿಕ-ಕಾಮ್ಯ-ಎಂಬ ಸರ್ವಕರ್ಮಗಳ ಫಲತ್ಯಾಗವೇ ಮೋಕ್ಷಶಾಸ್ತ್ರಗಳಲ್ಲಿ ತ್ಯಾಗವೆಂದು ಕರೆಯಲ್ಪಡುತ್ತದೆ-ಎಂದು ಕೆಲವುಮಂದಿ ವಿಚಕ್ಷಣರು ಹೇಳುತ್ತಾರೆ. ಹೀಗೆ ತಾರತಮ್ಯವುಂಟೆಂದು ತೋರಿದರೂ ಈ 'ಸನ್ಯಾಸ'-'ತ್ಯಾಗ' ಎಂಬ ಎರಡು ಶಬ್ದಗಳೂ ಪರಸ್ಪರ ಪರ್ಯಾಯ ಶಬ್ದಗಳಂತೆಯೇ ಗೀತೆಯಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ಇವೆರಡೂ ಏಕಾರ್ಥಪ್ರದರ್ಶಕವೆಂದು ನಿಶ್ಚಯಿಸಲ್ಪಟ್ಟದೆ. ಮುಮುಕ್ಷುವಿಗೆ ಯಜ್ಞಾದಿ ಕರ್ಮವೂ ದೋಷದಂತೆ ಬಂಧಕವಾಗುವುದರಿಂದ ತ್ಯಾಜ್ಯವೆಂದು ವೈದಿಕರಲ್ಲಿ ಕೆಲವರು ಹೇಳುತ್ತಾರೆ. ಯಜ್ಞ-ದಾನ-ತಪಃ-ಕರ್ಮಗಳು ತ್ಯಾಜ್ಯವಲ್ಲವೆಂದು ಇತರ ಪಂಡಿತರು ಹೇಳುತ್ತಾರೆ. ಈ ವಿಷಯದಲ್ಲಿ ನನ್ನ ನಿಶ್ಚಯವನ್ನು ಹೇಳುತ್ತೇನೆ ಕೇಳು:—ತ್ಯಾಗವೆಂಬುದು ತ್ರಿವಿಧ—೧. ಫಲವಿಷಯಕ. ೨. ಕರ್ಮ

ವಿಷಯಕ. ೩. ಕರ್ತೃತ್ವವಿಷಯಕ. ಕರ್ಮಜನ್ಯಸ್ವರ್ಗಾದಿ ಫಲವು ನನಗೆ ಬೇಡವೆಂಬುದು ಫಲತ್ಯಾಗ. ಈ ಕರ್ಮವು ನನ್ನದೆಂಬ ಮಮತೆಯ ಪರಿತ್ಯಾಗವು ಕರ್ಮತ್ಯಾಗ. ಸರ್ವೇಶ್ವರನೇ ಕರ್ತಾ-ಎಂಬ ಅನುಸಂಧಾನದಿಂದ ತನ್ನ ಕರ್ತೃತ್ವತ್ಯಾಗ-ಕರ್ತೃತ್ವತ್ಯಾಗವು. ಮುಮುಕ್ಷುವೂ ಕೂಡ ಯಜ್ಞ-ದಾನ-ತಪಃ ಕರ್ಮಗಳನ್ನು ಎಂದಿಗೂ ಬಿಡಕೂಡದು. ಈ ಯಜ್ಞ ದಾನ ತಪಃ-ಕರ್ಮಗಳು ಮುಮುಕ್ಷುಗಳಿಗೂ ಪ್ರಾಚೀನ ಕರ್ಮವಿನಾಶಕಗಳಾದುದರಿಂದ, ಸಂಗವನ್ನೂ ಫಲಗಳನ್ನೂ ತ್ಯಜಿಸಿ ಅವುಗಳನ್ನೂ ಅವರೂ ಕೂಡ ಆಚರಿಸಲೇಬೇಕೆಂಬುದೇ ನನ್ನ ನಿಶ್ಚಯ. ಇದೇ ಉತ್ತಮವಾದ ಮತ. ನಿಯತವಾದ ನಿತ್ಯ ನೈಮಿತ್ತಿಕ ಕರ್ಮಗಳ ತ್ಯಾಗವು ಅನುಚಿತವಾದುದು. ಅಜ್ಞಾನದಿಂದ ಅವುಗಳನ್ನೂ ಬಿಡೋಣವು ತಾಮಸವಾದ ತ್ಯಾಗವೆಂದು ಗರ್ಹಿತವಾಗುವುದು. ದುಃಖಕರವೆಂತಲೂ ಕಾಯಕ್ಲೇಶಕರವೆಂತಲೂ ಭೀತಿಯಿಂದ ಕರ್ಮತ್ಯಾಗವಂ ಮಾಡಿದರೆ ಅದು ರಾಜಸತ್ಯಾಗವೆಂದು ಕರೆಯಲ್ಪಡುವುದು. ಅದರಿಂದ ತ್ಯಾಗಫಲವೂ ಉಂಟಾಗಲಾರದು. ಕರ್ತವ್ಯವೆಂದು ವಿಹಿತವಾದ ನಿಯತಕರ್ಮವನ್ನು ಆಚರಿಸುತ್ತ, ಸಂಗವನ್ನೂ ಫಲವನ್ನೂ ತ್ಯಜಿಸೋಣವೇ ಸಾತ್ತ್ವಿಕತ್ಯಾಗವು."

ಈ ಪ್ರಕಾರ ಉಪದೇಶಿಸುತ್ತ ಶ್ರೀಕೃಷ್ಣನು ಸಾತ್ತ್ವಿಕತ್ಯಾಗನಿಷ್ಠನ ಗುಣಾತಿಶಯಗಳನ್ನೆಲ್ಲಾ ಹೇಳಿ, ಕರ್ಮಫಲವು ಅನಿಷ್ಟ-ಇಷ್ಟಮಿಶ್ರ ಎಂದು ತ್ರಿವಿಧವೆಂತಲೂ, ಸರ್ವಕರ್ಮಸಿದ್ಧಿಗೆ ಅಧಿಷ್ಠಾನ-ಕರ್ತಾ-ಕರಣ-ಚೇಷ್ಟಾ-ದೈವ-ಎಂಬೀ ೫ ಕಾರಣಗಳೆಂತಲೂ, ಕರ್ಮಚೋದನೆಯು ಜ್ಞಾನ-ಜ್ಞೇಯ-ಪರಿಜ್ಞಾತಾ ಎಂದು ತ್ರಿವಿಧವೆಂತಲೂ, ಕರ್ಮಸಂಗ್ರಹವು ಕರಣ-ಕರ್ಮ-ಕರ್ತಾ ಎಂದು ತ್ರಿವಿಧವೆಂತಲೂ, ಗುಣಕಾರ್ಯಗಣನದಲ್ಲಿ ಜ್ಞಾನ-ಕರ್ಮ-ಕರ್ತಾ ಎಂದು ತ್ರಿವಿಧವೆಂತಲೂ, ಈ ಜ್ಞಾನ-ಕರ್ಮ-ಕರ್ತೃ ಎಂಬ ಮೂರು ಭೇದಗಳೂ ಸಾತ್ತ್ವಿಕ-ರಾಜಸ-ತಾಮಸ-ಎಂದು ಪ್ರತ್ಯೇಕ ತ್ರಿವಿಧವೆಂತಲೂ ನಿರೂಪಿಸಿ

ಅವುಗಳ ಲಕ್ಷಣಗಳನ್ನೂ ವಿವರಿಸಿ, ಬುದ್ಧಿಯು ಸಾತ್ವಿಕ-ರಾಜಸ-ತಾಮಸವೆಂದು ತ್ರಿವಿಧವೆಂತಲೂ, ಧೃತಿಯೂ ಸಾತ್ವಿಕ-ರಾಜಸ-ತಾಮಸವೆಂದು ತ್ರಿವಿಧವೆಂತಲೂ, ಸುಖವೂ ಸಾತ್ವಿಕ-ರಾಜಸ-ತಾಮಸವೆಂದು ತ್ರಿವಿಧವೆಂತಲೂ, ಅವುಗಳ ಲಕ್ಷಣಗಳೊಡನೆ ವಿಶದೀಕರಿಸಿ, ಈ ಸತ್ವ ರಜಸ್ತಮೋಗುಣಗಳಿಂದ ರಹಿತವಾದ ಪ್ರಾಣಿಜಾತವು ಭೂಲೋಕದಲ್ಲಾಗಲೀ ದೇವಲೋಕದಲ್ಲಾಗಲೀ ಎಲ್ಲಿಯೂ ಇಲ್ಲವೆಂದು ಹೇಳಿ, ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ-ಎಂಬೀ ನಾಲ್ಕು ವರ್ಣಗಳ ಸ್ವಭಾವ ಜನ್ಯವಾದ ಕರ್ಮಗಳನ್ನೂ ವಿವರಿಸಿ, ಸ್ವಸ್ವಕರ್ಮನಿರತರಾಗಿಯೇ ಅವರವರು ಸಿದ್ಧಿಯಂ ಪಡೆಯಬೇಕೆಂಬ ಪರಮಾರ್ಥವನ್ನೂ ತಿಳಿಸಿ, ಸ್ವಧರ್ಮವೇ ಗುಣರಹಿತವಾಗಿದ್ದಾಗ್ಯೂ ಪರಧರ್ಮಕ್ಕಿಂತ ಶ್ರೇಷ್ಠವಾದುದೆಂದು ನಿರೂಪಿಸಿ, ಕರ್ಮನಿಷ್ಠೆಯೇ ಶ್ರೇಷ್ಠವಾದುದೆಂದು ನಿಷ್ಕರ್ಷಿಸಿ, ಜ್ಞಾನಯೋಗಫಲವಾದ ನೈಷ್ಕರ್ಮ್ಯಸಿದ್ಧಿಯನ್ನೂ ಫಲಸಂಗತ್ಯಾಗದಿಂದ ಕರ್ಮಯೋಗಿಯು ಹೊಂದುವನೆಂತಲೂ ವಿವರಿಸಿ, ಅಂತಹ ಸಿದ್ಧಿಯಂ ಪಡೆದವನ ಬ್ರಹ್ಮಪ್ರಾಪ್ತಿ ಪ್ರಕಾರವನ್ನು ವರ್ಣಿಸುತ್ತಾನೆ.

“ ವಿಶುದ್ಧಬುದ್ಧಿಯಿಂದ ಕೂಡಿದವನಾಗಿ ಧೃತಿಯಿಂದ ಆತ್ಮನಿಯಮನವಂ ಮಾಡಿ, ಶಬ್ದಾದಿವಿಷಯಗಳಂ ತ್ಯಜಿಸಿ, ರಾಗದ್ವೇಷಗಳನ್ನೂ ಬಿಟ್ಟು, ವಿವಿಕ್ತಸೇವಿಯಾಗಿ, ಲಘ್ವಾಹಾರವುಳ್ಳವನಾಗಿ, ವಾಕ್ಕಾಯಮಾನಸನಿಯತಿಯಿಂದ ಧ್ಯಾನಯೋಗಪರನಾಗಿ ನಿತ್ಯವೈರಾಗ್ಯದೊಡನೆ ಕೂಡಿ, ಅಹಂಕಾರ-ಬಲ-ದರ್ಪ-ಕಾಮ-ಕ್ರೋಧಪರಿಗ್ರಹಗಳನ್ನು ತ್ಯಜಿಸಿ, ನಿರ್ಮಮನಾಗಿಯೂ, ಶಾಂತನಾಗಿಯೂ ಬ್ರಹ್ಮಭಾವವನ್ನು ಹೊಂದಿ ಆತ್ಮಾನುಭವವನ್ನು ಪಡೆಯುವನು. ಇಂತಹ ಅಧಿಕಾರಿಯು ಪ್ರಸನ್ನನಾಗಿ ಶೋಕ-ರಾಗ ವರ್ಜಿತನಾಗಿ (ಸರ್ವಭೂತ ಸಾಮ್ಯದಿಂದ) ನನ್ನಲ್ಲಿ ಪರಭಕ್ತಿಯಂ ಹೊಂದುವನು. ಕ್ರಮೇಣ ನನ್ನ ಅನುಗ್ರಹದಿಂದ ಶಾಶ್ವತವಾದ ಪದವಿಯನ್ನೂ

ಹೊಂದುವನು. ಆದುದರಿಂದ ನೀನು ಸರ್ವಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿ ಬುದ್ಧಿಯೋಗದಿಂದ ನನ್ನಲ್ಲೇ ನ್ಯಸ್ತಚಿತ್ತನಾಗಿ ಸರ್ವ ಸಾಂಸಾರಿಕ ಕ್ಲೇಶಗಳನ್ನೂ ದಾಟುವವನಾಗು. ನನ್ನ ಮಾತನ್ನು ಕೇಳದೆ ಅಹಂಕಾರದಿಂದ ಅನ್ಯಮಾರ್ಗಪ್ರವೃತ್ತನಾದರೆ ನಷ್ಟನಾಗುವಿ. ಯುದ್ಧಮಾಡುವುದಿಲ್ಲವೆಂದು ಹಠವಂ ಹಿಡಿದರೆ ನಿನ್ನನ್ನು ಪ್ರಕೃತಿಯೇ ನಿಗ್ರಹಿಸಿ ನಿನ್ನಿಂದ ಆ ಕೆಲಸವನ್ನು ಮಾಡಿಸುವುದು. ಸರ್ವಪ್ರಾಣಿಗಳ ಹೃದ್ದೇಶದಲ್ಲೂ ಈಶ್ವರನು ವಾಸಮಾಡುತ್ತ ತನ್ನ ಮಾಯೆಯಿಂದ ಯಂತ್ರಾರೂಢವಾದ ಸರ್ವಭೂತಗಳನ್ನೂ ಆಡಿಸುತ್ತಾನೆ. ಅವನನ್ನೇ ಶರಣವನ್ನಾಗಿ ಹೊಂದಿ ಅವನ ಪ್ರಸಾದದಿಂದ ಪರಮ ಶಾಂತಿಯನ್ನೂ ಶಾಶ್ವತಸ್ಥಾನವನ್ನೂ ಹೊಂದು. ಈ ಪ್ರಕಾರ ಪರಮ ರಹಸ್ಯವನ್ನು ನಾನು ನಿನಗೆ ಉಪದೇಶಿಸಿರುತ್ತೇನೆ. ಇದನ್ನೆಲ್ಲಾ ಚೆನ್ನಾಗಿ ವಿಮರ್ಶಿಸಿ ವಿವೇಕದೊಡನೆ ನಡೆ. ಸರ್ವಗುಹ್ಯತಮವಾದ ಒಂದು ಪರಮಾರ್ಥವನ್ನು ಹೇಳುತ್ತೇನೆ ಕೇಳು. ನೀನು ನನಗೆ ಇಷ್ಟತಮನಾದುದರಿಂದಲೂ ದೃಢಮನಸ್ಕನಾದುದರಿಂದಲೂ ಈ ಪರಮರಹಸ್ಯವನ್ನು ನಿನಗೆ ಹಿತವೆಂದು ಹೇಳುವೆನು.

"ನನ್ನಲ್ಲೇ ಮನಸ್ಸಿಟ್ಟು, ನನ್ನಲ್ಲೇ ಭಕ್ತಿಯಂ ಮಾಡಿ, ನನ್ನನ್ನೇ ನಮಸ್ಕರಿಸು. ಹೀಗೆ ಮಾಡುವುದರಿಂದ ನನ್ನನ್ನೇ ನೀನು ಹೊಂದುವಿ. ಇದು ಸತ್ಯ. ನೀನು ನನಗೆ ಪ್ರಿಯನಾದುದರಿಂದ ಪ್ರತಿಜ್ಞಾಪೂರ್ವಕ ಹೇಳುತ್ತೇನೆ."

"ಕರ್ಮಯೋಗ-ಜ್ಞಾನಯೋಗ-ಭಕ್ತಿಯೋಗರೂಪವಾದ ಸರ್ವ ಧರ್ಮಗಳನ್ನೂ ನನ್ನ ಆರಾಧನರೂಪವಾಗಿ ಆಚರಿಸುತ್ತ, ಫಲ ಕರ್ಮ ಕರ್ತೃತ್ವಾದಿ ಪರಿತ್ಯಾಗವಂ ಮಾಡಿ ನನ್ನನ್ನು ಒಬ್ಬನನ್ನೇ ಪ್ರಾಪ್ಯನೆಂದೂ ಉಪಾಯಭೂತನೆಂದೂ ಭಜಿಸಿ ಶರಣಾಗತನಾಗು. ನಾನೇ ನಿನ್ನನ್ನು ಸರ್ವಪಾಪಗಳಿಂದಲೂ ಮುಕ್ತನಾಗುವಂತೆ ಮಾಡುವೆನು, ಶೋಕಪಡಬೇಡ. (ನಾನು ಹೇಳುವಂತೆ ಕೇಳಿ ಕೃತಾರ್ಥನಾಗು)

"ಈ ಪರಮ ರಹಸ್ಯವನ್ನು ಅತಪಸ್ಕನಿಗೂ, ಅಭಕ್ತನಿಗೂ, ಅಶುಶ್ರೂಷುವಿಗೂ, ಅಸೂಯಾಪರನಿಗೂ ಎಂದಿಗೂ ಹೇಳಬಾರದು. ನನ್ನ ಭಕ್ತೋತ್ತಮರಿಗೆ ಇದನ್ನು ಉಪದೇಶಿಸಬೇಕು.

"ಈ ನಮ್ಮ ಸಂವಾದವನ್ನು ಯಾರು ಪಠನಮಾಡುತ್ತಾರೋ ಅವರು ಜ್ಞಾನ ಯಜ್ಞದಿಂದ ನನ್ನನ್ನು ಆರಾಧಿಸುತ್ತಾರೆ. ಶ್ರದ್ಧೆ ಯೊಡನೆ ಅನಸೂಯೆಯಿಂದ ಕೇಳುವವರೂ ಕೂಡ ಮುಕ್ತರಾಗಿ ಪುಣ್ಯಲೋಕಗಳನ್ನು ಹೊಂದುವರು."

ಈ ಪ್ರಕಾರ ಉಪದೇಶಿಸಿ:—"ಎಲೈ ಅರ್ಜುನನೇ! ಏಕಾಗ್ರ ಚಿತ್ತನಾಗಿ ನೀನು, ನಾನುಉಪದೇಶಿಸಿದ ಇದನ್ನೆಲ್ಲಾ ಕೇಳಿ ತಿಳಿದು ಕೊಂಡೆಯಾ? ನಿನ್ನ ಅಜ್ಞಾನ (ಸಮ್ಮೋಹ)ವು ಪ್ರಣಷ್ಟವಾಯಿತೇ? ಹೇಳು"—ಎಂದು ಕೇಳಿದನು.

**ಅರ್ಜುನನ ಉತ್ತರ:**—"ನನಗೆ ನಿನ್ನ ಅನುಗ್ರಹದಿಂದ ಮೋಹವು ನಷ್ಟವಾಯಿತು; ತತ್ವಜ್ಞಾನರೂಪವಾದ ಸ್ಮೃತಿಯು ಉಂಟಾಯಿತು. ಈಗ ನಾನು ಸಂದೇಹರಹಿತನಾಗಿ ಸ್ಥಿರಬುದ್ಧಿ ಯುಳ್ಳವನಾಗಿದೇನೆ. ನಿನ್ನ ಮಾತನ್ನು ಕೇಳಿ ಆ ಪ್ರಕಾರ ನಡೆ ಯುವೆನು."

(ಹೀಗೆ ಅರ್ಜುನನು ಹೇಳಿ ಯುದ್ಧೋನ್ಮುಖನಾದನು.)

"ಈ ಪ್ರಕಾರ ರೋಮಹರ್ಷಣವಾಗಿ ಅದ್ಭುತವಾಗಿರುವ ಈ ವಾಸುದೇವಾರ್ಜುನ ಸಂವಾದವನ್ನು ನಾನು ವ್ಯಾಸರ ಅನುಗ್ರಹ ದಿಂದ ಸಾಕ್ಷಾದ್ಯೋಗೇಶ್ವರನಾದ ಶ್ರೀ ಕೃಷ್ಣನ ಮುಖದಿಂದಲೇ ಹೊರಡುತ್ತಿರುವಾಗ—ದಿವ್ಯಜ್ಞಾನದಿಂದ ಕೇಳಿ ತಿಳಿದುಕೊಂಡೆನು. ಈ ಸಂವಾದವನ್ನು ಪುನಃ ಪುನಃ ಸ್ಮರಿಸಿ ಅತ್ಯಂತ ಹೃಷ್ಟನಾಗುತ್ತಿ ದೇನೆ. ಆ ಅತ್ಯದ್ಭುತವಾದ ವಿಶ್ವರೂಪವನ್ನೂ ಸ್ಮರಿಸಿ ಸ್ಮರಿಸಿ ಅತ್ಯಂತ ವಿಸ್ಮಯಾವಿಷ್ಟನಾಗಿ ಹೃಷ್ಟನಾಗುತ್ತಿದೇನೆ. ಮುಖ್ಯವಾಗಿ ಹೇಳುತ್ತೇನೆ ಕೇಳು. ಶ್ರೀ ಯೋಗೇಶ್ವರನಾದ ಕೃಷ್ಣನೂ ಧನು

ರ್ಧಾರಿಯಾದ ಪಾರ್ಥನೂ ಎಲ್ಲಿರುವರೋ ಅಲ್ಲಿ ಶ್ರೀ, ವಿಜಯ, ಭೂತಿ, ನೀತಿ ಇವುಗಳೆಲ್ಲಾ ಸ್ಥಿರವಾಗಿರುವುವು. ಇದೇ ನನ್ನ ನಿಶ್ಚಯ."—ಎಂದು ಸಂಜಯನು ಧೃತರಾಷ್ಟ್ರನಿಗೆ ಹೇಳಿದನು.

ಈ ಪ್ರಕಾರ ಗೀತಾಶಾಸ್ತ್ರದ ೧೮ ಅಧ್ಯಾಯಗಳ ಸಾರಾಂಶ ವನ್ನು ನಾವು ಇಲ್ಲಿ ಸಂಗ್ರಹಿಸಿ ಸೂಚಿಸಿರುತ್ತೇವೆ. ಈ ಅರ್ಥಗಳಲ್ಲಿ ಪ್ರಕೃತಕಾಲಾನುಗುಣವಾದ ಪರಮಾರ್ಥವನ್ನು ಮುಂದೆ ವಿವರಿಸುವೆವು.

---

ಶ್ರೀ

## ೬ನೆಯ ಪ್ರಕರಣ

## ಗೀತಾಶಾಸ್ತ್ರದ ಕೆಲವು ಮುಖ್ಯ ತತ್ವಾಂಶಗಳು

ಗೀತಾಶಾಸ್ತ್ರದಲ್ಲಿರುವ ತತ್ವಾಂಶಗಳಲ್ಲಿ ಕೆಲವು ಮುಖ್ಯವಾದ ಅಂಶಗಳನ್ನು ಉದಾಹರಿಸುತ್ತೇವೆ:—

(i) **ವೇದಾಂತ ತತ್ವಗಳು :—**

೧. "ಬ್ರಹ್ಮಲೋಕ ಮೊದಲು ಸರ್ವಲೋಕಗಳೂ ಪುನರಾವೃತ್ತಿಯಂ ಪಡೆಯುವುವು; ನನ್ನನ್ನೇ ಯಾರು ಶರಣವನ್ನಾಗಿ ಹೊಂದುವರೋ ಅವರಿಗೆ ಪುನರಾವೃತ್ತಿಯು ಇಲ್ಲ—ಎಲೈ! ಕೌಂತೇಯ! ನೀನು ಇದನ್ನು ತಿಳಿ." (VIII—16)

೨. "ಯಾರು ಅನನ್ಯಾಶ್ರಯರಾಗಿ ನನ್ನನ್ನೇ ಚಿಂತಿಸುತ್ತ, ನನ್ನನ್ನೇ ಭಜಿಸುತ್ತಾರೋ ಅಂತಹ ನಿತ್ಯಾಭಿಯುಕ್ತರ ಯೋಗಕ್ಷೇಮವನ್ನೆಲ್ಲಾ ನಾನೇ ವಹಿಸುತ್ತೇನೆ." (IX—22)

೩. “ ನನ್ನನ್ನೇ ಯಾರು ಶರಣವನ್ನಾಗಿ ಆಶ್ರಯಿಸುತ್ತಾರೋ ಅಂತಹ ಪ್ರಪನ್ನರೇ ಮಾಯಾಮಹಾಂಬುಧಿಯನ್ನು ದಾಟುತ್ತಾರೆ.” (VII—14)

೪. “ ನನ್ನನ್ನು ಭಜಿಸುವವರು ನಾಲ್ಕು ವಿಧವಾಗಿರುವರು. ಆರ್ತ-ಜಿಜ್ಞಾಸು-ಅರ್ಥಾರ್ಥಿ-ಜ್ಞಾನಿ ಎಂದು ನಾಲ್ಕು ವಿಧವಾದ ಈ ನನ್ನ ಭಕ್ತರಲ್ಲಿ ಜ್ಞಾನಿಯೇ ನನ್ನನ್ನು ಅನನ್ಯಮನಸ್ಕನಾಗಿ ಭಜಿಸುವುದರಿಂದ ಅವನೇ ನನಗೆ ಪ್ರಿಯತಮನು.” (VII—16-17)

೫. “ ಅನೇಕ ಜನ್ಮಗಳು ಕಳೆದ ಮೇಲೆ ಚೇತನನು ಜ್ಞಾನಿಯಾಗಿ ನನ್ನನ್ನೇ ಶರಣವನ್ನಾಗಿ ಹೊಂದುವನು. ವಾಸುದೇವನೇ ಪ್ರಾಪ್ಯವಾದ ಸರ್ವವೂ ಎಂದು ನನ್ನನ್ನೇ ಭಜಿಸುವ ಮಹಾತ್ಮನು ಅತ್ಯಂತ ದುರ್ಲಭನು.” (VII—19)

೬. “ ಈ ಲೋಕದಿಂದ ಪ್ರಯಾಣಮಾಡುವವರ ಮಾರ್ಗವು ದ್ವಿವಿಧ—೧. ಶುಕ್ಲಮಾರ್ಗ ೨. ಕೃಷ್ಣಮಾರ್ಗ. ಶುಕ್ಲಮಾರ್ಗವು (ಅರ್ಚಿರಾದಿ ಮಾರ್ಗವು) ಮೋಕ್ಷವನ್ನು ಹೊಂದಿಸುವುದು ; ಕೃಷ್ಣಮಾರ್ಗವು (ಧೂಮಾದಿ ಮಾರ್ಗವು) ಪುನರಾವೃತ್ತಿಯನ್ನು ಹೊಂದಿಸುವುದು.” (VIII—26)

೭. “ ನೀನು ಮಾಡಬೇಕಾದ ಸರ್ವ ಕರ್ಮಗಳನ್ನೂ ನನ್ನ ಆರಾಧನರೂಪವಾಗಿ ಮಾಡಿ ನನ್ನಲ್ಲೇ ಸಮರ್ಪಿಸು. ನಿನ್ನ ಮನಸ್ಸನ್ನು ನನ್ನಲ್ಲೇ ಇಡು. ನನ್ನ ಅನುಗ್ರಹದಿಂದ ನೀನು ಸರ್ವ ಕ್ಲೇಶವಿನಿರ್ಮುಕ್ತನಾಗುವಿ.” (XVIII—56-57)

೮. “ ನನ್ನಲ್ಲೇ ನಿನ್ನ ಮನಸ್ಸನ್ನು ಇಡು, ನನ್ನನ್ನೇ ಭಜಿಸು, ನನ್ನನ್ನೇ ಆರಾಧಿಸು, ನನ್ನನ್ನೇ ನಮಸ್ಕರಿಸು. ಹೀಗೆ ಮಾಡಿದರೆ ನೀನು ನನ್ನನ್ನೇ ಹೊಂದುವಿ. ಇದು ಸತ್ಯವೆಂದು

(ii) **ನೀತಿ ತತ್ವಗಳು :—**

೧. " ದೇವತೆಗಳನ್ನೂ, ದ್ವಿಜರನ್ನೂ ಗುರುಗಳನ್ನೂ ಪೂಜಿ ಸೋಣವೂ, ಶುಚಿಯಾಗಿರೋಣವೂ, ಸತ್ಯಶೀಲತ್ವವೂ, ಇಂದ್ರಿಯ ಜಯವೂ, ಭೂತದಯೆಯೂ—ಇವುಗಳೆಲ್ಲಾ ಶಾರೀರವಾದ ತಪಸ್ಸೆಂದು ಕರೆಯಲ್ಪಡುತ್ತವೆ" (XVII—14)

೨. " ಇತರರ ಮನಸ್ಸನ್ನು ನೋಯಿಸದೆ ಇರುವ ಮಾತುಗಳನ್ನೇ ಹೇಳೋಣವು, ಸತ್ಯವನ್ನೇ ಹೇಳೋಣವು, ಇತರರಿಗೆ ಪ್ರಿಯ ವಾದುದನ್ನೂ ಹಿತವಾದುದನ್ನೂ ಹೇಳೋಣವು, ವೇದಾದಿ ಶಾಸ್ತ್ರಗಳ ಪಠನವು—ಇವುಗಳೆಲ್ಲಾ ವಾಚಿಕ ತಪಸ್ಸೆಂದು ಕರೆ ಯಲ್ಪಡುತ್ತವೆ." (XVII—15)

೩. " ಮನಶ್ಶಾಂತಿಯೂ, ಪರೋಪಕಾರ ಬುದ್ಧಿಯೂ, ಮೌ ನವೂ, ಧ್ಯಾನ ಮಾಡೋಣವೂ, ಚಿತ್ತನೈರ್ಮಲ್ಯವೂ—ಇವು ಗಳೆಲ್ಲಾ ಮಾನಸವಾದ ತಪಸ್ಸೆಂದು ಕರೆಯಲ್ಪಡುತ್ತವೆ." (XVII—16)

೪. " ಭಯರಾಹಿತ್ಯವೂ, ಚಿತ್ತಶುದ್ಧಿಯೂ, ಆತ್ಮಚಿಂತೆಯೂ, ದಾನಶೀಲತ್ವವೂ, ಇಂದ್ರಿಯ ಜಯವೂ, (ಪರೋಪಕಾರವೂ) ಯಜ್ಞವೂ, ವೇದಾಧ್ಯಯನವೂ, ತಪಸ್ಸೂ, ಋಜುಶೀಲ ತ್ವವೂ, ಭೂತದಯೆಯೂ, ಸತ್ಯವಾದಿತ್ವವೂ, ಕ್ರೋಧ ರಾಹಿತ್ಯವೂ, ಪಾಪಬುದ್ಧಿ ರಾಹಿತ್ಯವೂ, ಮನಶ್ಶಾಂತಿಯೂ, ದುಷ್ಟವಚನತ್ಯಾಗವೂ, ಕಾರುಣ್ಯವೂ, ದುಷ್ಕಾಮರಾಹಿ ತ್ಯವೂ, ಮಾರ್ದವವೂ, ಲಜ್ಜೆಯೂ, ಸ್ಥೈರ್ಯವೂ, ಶೌರ್ಯವೂ, ಕ್ಷಮೆಯೂ, ಮನಃಪ್ರಸಾದವೂ, ಸದ್ವೃತ್ತವೂ, ಅದ್ರೋ ಹವೂ, ಗರ್ವರಾಹಿತ್ಯವೂ—ಇವುಗಳೆಲ್ಲಾ (ಧಾರ್ಮಿಕರಾದ) ಭಗವದ್ಭಕ್ತವರ್ಯರ ಗುಣಗಳು." (XVI—1-3)

(iii) **ಯೋಗತತ್ವಗಳು :—**

೧. "ಯೋಗಿಯಾದವನು ಯಾವಾಗಲೂ ಏಕಾಂತವಾಗಿ ಒಬ್ಬನೇ ರಹಸ್ಯವಾದ ಸ್ಥಲದಲ್ಲಿ ಕುಳಿತು ಧ್ಯಾನಪರನಾಗಿ, ಸಕಲ ವಿಷಯಗಳಿಂದಲೂ ಸಕಲ ಕಾಮಗಳಿಂದಲೂ ನಿವೃತ್ತನಾಗಿ ಚಿತ್ತೈಕಾಗ್ರ್ಯವಂ ಪಡೆಯಬೇಕು." (VI—10)

೨. "ಯೋಗಿಯು ಶುಚಿಯಾದ ಸ್ಥಲದಲ್ಲಿ ಅತ್ಯುಚ್ಚವೂ ಅತಿ ನೀಚವೂ ಅಲ್ಲದ ಸ್ಥಿರವಾದ ಪೀಠದ ಮೇಲೆ ದರ್ಭ—ಕೃಷ್ಣಾಜಿನ-ಶುಭ್ರವಸ್ತ್ರಗಳನ್ನು ಹರಡಿ, ಆ ಪೀಠದಮೇಲೆ ಕುಳಿತು ಚಿತ್ತವನ್ನು ನಿಶ್ಚಲವಾಗಿ ನಿಲ್ಲಿಸಿ ಧ್ಯಾನಮಾಡಬೇಕು." (VI—11-12)

೩. "ಯಾವನು ಉತ್ಕ್ರಾಂತಿ ಸಮಯದಲ್ಲಿ ನಿಶ್ಚಲಚಿತ್ತನಾಗಿ ಯೋಗಶಕ್ತಿಯಿಂದ ಭ್ರೂಯುಗ್ಮದ ಮಧ್ಯದಲ್ಲಿ ಪ್ರಾಣವನ್ನು ಸ್ಥಾಪಿಸಿ ಪರಮಾತ್ಮಧ್ಯಾನಪರನಾಗುತ್ತಾನೋ ಅವನೇ ಆ ಪರಾತ್ಪರವಸ್ತುವಾದ ಪರಮಾತ್ಮನನ್ನು ಹೊಂದುವನು." (VIII—10)

೪. "ಯಾವನು ಸರ್ವ ದ್ವಾರಗಳನ್ನೂ ಬಂಧಿಸಿ, ಅನ್ತರಾತ್ಮನಲ್ಲೇ ಮನಸ್ಸನ್ನು ದೃಢವಾಗಿ ನಿಲ್ಲಿಸಿ, ಪ್ರಾಣವನ್ನು ಮೂರ್ಧಸ್ಥಾನದಲ್ಲಿಟ್ಟು ಯೋಗಮಾರ್ಗದಿಂದ ಉತ್ಕ್ರಾನ್ತಿಯನ್ನು ಪ್ರಣವೋಪಾಸನದಿಂದಲೂ ನನ್ನ ಧ್ಯಾನದಿಂದಲೂ ಪಡೆಯುವನೋ—ಅವನು ಆತ್ಮಾನುಭವವೆಂಬ ಉನ್ನತ ಪದವಿಯನ್ನು ಹೊಂದುವನು." (VIII. 12-13)

೫. "ಯಾವನು ನನ್ನಲ್ಲೇ ಮನಸ್ಸನ್ನು ಯಾವಾಗಲೂ ಇಟ್ಟು-ಇತರ ವಿಷಯಗಳ ಚಿಂತೆಯಿಲ್ಲದೆ ಇರುವನೋ, ಅವನೇ ನನಗೆ ಪ್ರಿಯತಮನಾದ ಯೋಗಿಯಾದುದರಿಂದ ಅವನು-ನನ್ನನ್ನೇ ಸಾಕ್ಷಾತ್ತಾಗಿ ಹೊಂದುವನು." (VIII. 14)

(iv) **ಗೀತಾಶಾಸ್ತ್ರದಲ್ಲಿರುವ ವರ್ಣಾಶ್ರಮ ಧರ್ಮಾದಿ ತತ್ವಗಳು** :—ಗೀತಾಶಾಸ್ತ್ರದಲ್ಲಿ-ಚಾತುರ್ವರ್ಣ್ಯವು ಭಗವಂತನಿಂದಲೇ ಚೇತನರ ಪೂರ್ವಜನ್ಮಗಳ ಗುಣಕರ್ಮಾನುಗುಣವಾಗಿ ಸೃಷ್ಟಿಸಲ್ಪಟ್ಟಿತೆಂದು ಹೇಳಲ್ಪಟ್ಟಿದೆ. ಇದಕ್ಕೆ ತಾತ್ಪರ್ಯವೇನೆಂದರೆ—ಚೇತನರು ಅನಾದಿಕರ್ಮವಾಸನಾ ಪರವಶರಾಗಿ ಆಯಾ ಜನ್ಮಗಳಲ್ಲಿ ಮಾಡುತ್ತಿರುವ ಕಾರ್ಯಗಳೂ ಆಯಾ ಚೇತನರ ಗುಣಗಳೂ ಅವರವರ ಉತ್ತರೋತ್ತರ ಜನ್ಮಗಳಿಗೆ ಕಾರಣಭೂತವಾಗುವುದರಿಂದ, ಆಯಾ ಉತ್ತರ ಜನ್ಮಗಳಲ್ಲಿ ವರ್ಣಾಶ್ರಮದ ಭೇದಗಳು ಭಗವತ್ಸಂಕಲ್ಪದಿಂದಲೇ ಉಂಟಾಗುತ್ತವೆ. ಭಗವಂತನೇ ಇಂತಹ ಕೃತ್ಯಗಳನ್ನು ಮಾಡಿದವರಿಗೆ ಇಂತಹ ಜನ್ಮಗಳೆಂದು ನಿರ್ಣಯಿಸಿ ಇರುವುದರಿಂದ, ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರಾದಿ ವರ್ಣಭೇದಗಳೂ ಕೂಡ ಸಸ್ಯವರ್ಗ ಕೃಮಿಕೀಟ-ಪಕ್ಷಿ-ಮೃಗ-ಶುನಕ--ರಾಸಭ-ಪಶು-ವ್ಯಾಘ್ರ-ಸಿಂಹ--ಮನುಷ್ಯಾದಿ ಜಾತಿಗಳಂತೆಯೇ ಭಗವಂತನಿಂದಲೇ ಸೃಷ್ಟವಾಗುತ್ತವೆಯೆಂದು ಸಿದ್ಧಾಂತ ಮಾಡಲ್ಪಟ್ಟಿದೆ. ಆದುದರಿಂದ ಈ ಲೋಕದಲ್ಲಿರುವ ಮನುಷ್ಯವರ್ಗದ ವರ್ಣಾಶ್ರಮಾದಿ ಜಾತಿಭೇದಗಳು ಮಾನುಷ ಕಲ್ಪಿತವೆಂತಲೂ, ಭಗವತ್ಸಂಕಲ್ಪ ಕಲ್ಪಿತವಲ್ಲವೆಂತಲೂ—ವಾದಿಸುವ ನವೀನ ನಾಸ್ತಿಕ ಜನರ ವಚನಗಳು ಗೀತಾಶಾಸ್ತ್ರಕ್ಕೆ ವಿರುದ್ಧವಾಗಿಯೂ ಭಗವಂತನ ದಿವ್ಯಸೂಕ್ತಿಗೆ ಪ್ರತಿಕೂಲವಾಗಿಯೂ ಇವೆಯೆಂದು ಸುವ್ಯಕ್ತವಾಗಿದೆ. ಈ ನಾಸ್ತಿಕ ಜನರು ಹೇಳುವುದೇನೆಂದರೆ—"ಭಗವಂತನು ಮನುಷ್ಯಜಾತಿಯಲ್ಲಿ ಮಾತ್ರ ತಾರತಮ್ಯಗಳನ್ನು ಮಾಡುವವನಲ್ಲ. ಎಲ್ಲರನ್ನೂ ಏಕರೀತಿಯಾಗಿಯೇ ಸೃಷ್ಟಿಮಾಡಿರುತ್ತಾನೆ. ಎಲ್ಲರನ್ನೂ ಕೈ ಕಾಲು-ಕಣ್ಣು ಮೂಗು-ರಕ್ತ-ಮಾಂಸ-ಇಂದ್ರಿಯಾದಿಗಳಲ್ಲಿ ಭೇದವಿಲ್ಲದೆ ಸೃಷ್ಟಿ ಮಾಡಿರುತ್ತಾನಾಗಿ, ಬ್ರಾಹ್ಮಣ-ಕ್ಷತ್ರಿಯ-ವೈಶ್ಯ

ಶೂದ್ರಾದಿ ವಿಭಾಗಗಳನ್ನು ಭಗವಂತನು ಎಂದಿಗೂ ಕಲ್ಪಿಸಿ ಇರಲಾರನು. ಬ್ರಾಹ್ಮಣರು ತಮಗೆ ಉತ್ಕರ್ಷವನ್ನು ಉಂಟುಮಾಡಿಕೊಳ್ಳುವುದಕ್ಕೋಸ್ಕರ ಇಂತಹ ವರ್ಣಭೇದಗಳನ್ನು ಕಲ್ಪಿಸಿ ತಮಗೆ ಸಾಧಕವಾದ ಆಯಾ ವಚನಗಳನ್ನು ತಮ್ಮ ತಮ್ಮ ಶಾಸ್ತ್ರಗಳಲ್ಲಿ ಸೇರಿಸಿಕೊಂಡು ಇತರರನ್ನು ವಂಚಿಸುತ್ತಿದ್ದಾರೆ. ಬ್ರಾಹ್ಮಣರು ವೇದಶಾಸ್ತ್ರ ಪಠನಕ್ಕೆ ತಾವೇ ಅಧಿಕಾರಿಗಳೆಂತಲೂ ತಮಗೆ ಆಚಾರ್ಯ ಪದವಿಯು ಭಗವತ್ಸಂಕಲ್ಪದಿಂದ ಬಂದಿದೆ ಯೆಂತಲೂ ಹೇಳುತ್ತ ಇತರರಿಗೆ ದ್ರೋಹಮಾಡುತ್ತಾರೆ.” ಈ ಪ್ರಕಾರ ನಾನಾ ವಿಧವಾಗಿ ಬ್ರಾಹ್ಮಣರಲ್ಲಿ ವೃಥಾ ದೋಷಾರೋಪಣೆಗಳನ್ನು ಮಾಡುತ್ತ, ಈಚೆಗೆ ಪಾಶ್ಚಾತ್ಯಾದಿ ಬಾಹ್ಯಜಾತಿಗಳ ಮರ್ಯಾದೆಗಳನ್ನು ಅನುಸರಿಸಿ, ಭರತಮಂಡಲದ ರಾಜ್ಯಾಧಿಕಾರಿಗಳೇ ಮುಂತಾದ ನಾನಾ ಜಾತಿಗಳ ಜನರೂ ಕೂಡ ಬ್ರಾಹ್ಮಣ ದ್ವೇಷಿಗಳಾಗಿರುವುದು ಅತ್ಯಂತ ಶೋಚನೀಯವಾಗಿದೆ. ಈ ಪ್ರಕೃತ ಕಾಲದಲ್ಲಿ ಬೆಳೆದಿರುವ ಬ್ರಾಹ್ಮಣದ್ವೇಷವು ಅತಿ ದುಸ್ಸಹವಾಗಿ ಸಾಕ್ಷಾತ್ ಭಗವಂತನಿಗೇ ಅತ್ಯಂತ ಶೋಚನೀಯವಾಗಿದೆ ಯೆಂಬುದು ಶ್ರೀಕಲ್ಕಿಸಿಂಹಾವತಾರ ಮೂರ್ತಿಯಾದ ನನ್ನ ವಚನದಿಂದಲೇ ಎಲ್ಲರಿಗೂ ವ್ಯಕ್ತವಾಗಿದೆಯಷ್ಟೆ. ನಾನು ಹೀಗೆ ಬರೆಯುವುದರಿಂದ ಬ್ರಾಹ್ಮಣ ಪಕ್ಷಪಾತಿಯೆಂತಲೂ, ಇತರ ವರ್ಣಗಳಿಗೆ ವಿರೋಧಿಯೆಂತಲೂ ಭಾವಿಸುವವರು ನನ್ನಲ್ಲಿ ವೃಥಾ ದೋಷಾರೋಪಣೆಗಳಂ ಮಾಡುವ ನಾಸ್ತಿಕರೇ ಹೊರತು ಆಸ್ತಿಕರಲ್ಲ. ಶಿಶುಪಾಲಾದಿಗಳಂತೆ ಭಗವನ್ನಿಂದಕರಾದ ನಾಸ್ತಿಕರೆಲ್ಲರೂ ತಕ್ಕ ಶಿಕ್ಷೆಗಳಂ ಪಡೆದು ದಂಡನೀಯರಾಗುತ್ತಾರಷ್ಟೆ.

ನನಗೆ ನನ್ನ ಭಕ್ತರೆಲ್ಲರೂ ಯಾವ ಜಾತಿಗೆ ಸೇರಿದ್ದರೂ ಪ್ರಿಯರೇ ಆದುದರಿಂದ ಮೋಕ್ಷವಿಚಾರದಲ್ಲಿ ಅವರಿಗೆ ತಾರತಮ್ಯವನ್ನು ನಾನು ಕಲ್ಪಿಸುವುದೇ ಇಲ್ಲ. ಈ ಲೋಕದ ಆಚಾರ ವ್ಯವ

ಹಾರಗಳಲ್ಲಿ ಅವರವರ ಧರ್ಮಾನುಗುಣವಾಗಿ ಅವರವರು ನಡೆಯಬೇಕೆಂಬುದೇ ನನ್ನ ಅಭಿಮತವೆಂದು ನಿರ್ಣಯಿಸಿ ಗೀತಾಚಾರ್ಯನಾದ ನಾನೇ ಸ್ವಧರ್ಮ ಪರಿಪಾಲನವನ್ನು ಎಲ್ಲರೂ ಅಂಗೀಕರಿಸಲೇಬೇಕೆಂದು ಗೀತೆಯಲ್ಲೇ ಉದ್ಘೋಷಿಸಿರುತ್ತೇನಷ್ಟೆ. ಹೀಗೆ ನಾನೇ ನಿಷ್ಕರ್ಷಿಸಿ ಇದ್ದಾಗ್ಯೂ ಅದ್ಯಾಪಿ ಸಂಶಯಗ್ರಸ್ತರಾಗಿಯೂ ಹಠವಾದಿಗಳಾಗಿಯೂ ವರ್ಣಸಾಂಕರ್ಯಾದಿಗಳನ್ನು ಮಾಡಲುದ್ಯುಕ್ತರಾಗಿರುವವರೆಲ್ಲರೂ ನಾಸ್ತಿಕರೆಂದು ನಾನು ಪುನಃ ಪುನಃ ಹೇಳಬೇಕಾಗಿದೆ. "ನನಗೆ ಪ್ರಿಯವಾದುದೇ ಪುಣ್ಯವು, ನನಗೆ ಅಪ್ರಿಯವಾದುದೇ ಪಾಪವು"—ಎಂದು ನಾನು ಶ್ರೀಕೂರನಾಥಾದಿ ದಿವ್ಯಸೂರಿ ಸೂಕ್ತಿಗಳಿಗೆ ಅನುಗುಣವಾಗಿ ಈಗ ಸಕಲ ಲೋಕ ಹಿತವನ್ನೇ ಪ್ರಕಟಪಡಿಸುತ್ತಿದೇನೆ. ನನಗೆ ಪ್ರಿಯಭಕ್ತರಾದ ಪ್ರಹ್ಲಾದ-ವಿಭೀಷಣ-ವಿದುರ-ಶಠಾರಿ-ಕಲಿಧ್ವಂಸಿ--ಪ್ರಾಣನಾಥ—ನಮ್‌ಪಾಡುವಾರ್-ತಿರುಕ್ಕಚ್ಚಿನಂಬಿ-ಧನುರ್ದಾಸಾದಿಗಳ ವಿಷಯದಲ್ಲಿ ನಾನು ಹಿಂದೆ ಮಾಡಿರುವ ಪರಮಾನುಗ್ರಹ ಪರಂಪರೆಗಳನ್ನು ಅವರವರ ಚರಿತ್ರಗಳಿಂದ ಈಗಲೂ ಎಲ್ಲರೂ ತಿಳಿದು, ಅವರಂತೆಯೇ ನನ್ನಲ್ಲಿ ಪರಿಪೂರ್ಣ ವಿಶ್ವಾಸಶಾಲಿಗಳಾಗಿ ಉಜ್ಜೀವಿಸಬೇಕಾಗಿದೆ. ನಿಕೃಷ್ಟ ಜಾತಿಯೆಂದು ನನ್ನ ಪ್ರಿಯಭಕ್ತರನ್ನು ನಾನು ಎಂದಿಗೂ ಕೈ ಬಿಡುವುದಿಲ್ಲ. "ನ ಮೇಭಕ್ತಃ ಪ್ರಣಶ್ಯತಿ." ನನ್ನ ಹೆಸರು "ಅಚ್ಯುತ"; "ನ ಚ್ಯಾವಯತಿಭಕ್ತಾನ್-ಇತ್ಯಚ್ಯುತಃ"—ಎಂಬ ವ್ಯುತ್ಪತ್ತಿಯೇ ನನಗೆ ಅತ್ಯಂತ ಅಭಿಮತವಾದುದು. "ನ-ಚ್ಯುತಃ-ಅಚ್ಯುತಃ"—ಎಂಬ ವ್ಯುತ್ಪತ್ತಿಯು ನನ್ನ ಮಾಹಾತ್ಮ್ಯಕ್ಕೆ ಅತ್ಯಂತ ಲಾಘವವನ್ನುಂಟುಮಾಡುವುದರಿಂದಲೂ ನಾನು ಚ್ಯುತಿರಹಿತನೆಂಬುದು ಸ್ವತಃಸಿದ್ಧವಾಗಿಯೇ ಇರುವುದರಿಂದಲೂ "ಭಕ್ತರನ್ನು ಕೈಬಿಡದವನು" ಎಂಬ ಅರ್ಥವುಳ್ಳ ಪ್ರಥಮವ್ಯುತ್ಪತ್ತಿಯೇ ಅಂಗೀಕಾರ್ಯವು. ತಿರ್ಯಗ್ಜಂತುವಾದ ಜಟಾ

ಯುವಿಗೆ ಕೂಡ ಬ್ರಹ್ಮಮೇಧ ಸಂಸ್ಕಾರವಂ ಮಾಡಿದ ನಾನು ಮಾನುಷ ಜನ್ಮದ ಭಕ್ತರನ್ನು ಕೈ ಬಿಡುವೆನೇ? ಪರಿಶೀಲಿಸಿ ನೋಡಿರಿ.

ಹೀಗೆ ನನ್ನ ಭಕ್ತರಲ್ಲಿ ನನಗೆ ಅತ್ಯಂತ ಪ್ರೀತಿಯು ಇದ್ದಾಗ್ಯೂ ವರ್ಣಾಶ್ರಮ ಧರ್ಮಗಳಿಗೆ ವಿರೋಧವನ್ನು ಆಚರಿಸೋಣವು ನನಗೆ ಪ್ರಿಯವಾಗಲಾರದು. "ವಿದುರಾನ್ನಾನಿ ಬುಭುಜೇ ಶುಚೀನಿ ಗುಣವನ್ತಿ ಚ"—ಎಂಬ ವಚನದ ಸ್ವಾರಸ್ಯವನ್ನು ಗ್ರಹಿಸಿರುವವರು ಕೃಷ್ಣಾವತಾರದಲ್ಲಿ ನನ್ನ ವಿದುರಾನ್ನ ಭಕ್ಷಣವನ್ನು ನಿಂದಿಸುವರು? ನನ್ನ ಅನುಷ್ಠಾನವು ಎಂದಿಗೂ ಆಕ್ಷೇಪಾರ್ಹವಾದುದಲ್ಲ. ಶ್ರೀರಾಮಾನುಜಾಚಾರ್ಯರು ತಿರುಕ್ಕಚ್ಚಿ ನಂಬಿಯೆಂಬ ಮಹಾತ್ಮರ ಭುಕ್ತಿಶೇಷವನ್ನು ಸ್ವೀಕರಿಸಲು ಅಪೇಕ್ಷಿಸಿದರೂ, ಅದು ನನಗೆ ಅಭಿಮತವಾಗಿ ತೋರಲಿಲ್ಲವಾದುದರಿಂದ ನಾನೇ ಅವರ ಉದ್ದೇಶಕ್ಕೆ ಭಂಗವನ್ನುಂಟುಮಾಡಿ ವರ್ಣಾಶ್ರಮ ಧರ್ಮ ಪರಿಪಾಲನವಂ ಮಾಡಿದೆನು. ಇಂತಹ ದೃಷ್ಟಾಂತಗಳಿಂದ ಸಾಕ್ಷಾತ್ ಪರಮಾತ್ಮನಾದ ನನ್ನ ಅಭಿಪ್ರಾಯಗಳನ್ನು ವಿವೇಕಿಗಳೆಲ್ಲರೂ ತಿಳಿಯಬಹುದಷ್ಟೆ. ಸತ್ಪುರುಷರಿಗೆ ಅಂತರ್ಯಾಮಿಯಾಗಿ ನಾನೇ ನಿಂತು ಸರ್ವಸಂಶಯ ನಿವೃತ್ತಿಯಂ ಮಾಡುತ್ತಿರುವುದರಿಂದ.-"ಸತಾಂ ಹಿ ಸನ್ದೇಹಪದೇಷು ವಸ್ತುಷು ಪ್ರಮಾಣಮನ್ತಃಕರಣಪ್ರವೃತ್ತಯಃ"—ಎಂಬ ಕಾಳಿದಾಸ ವಚನಕ್ಕೆ ಅನುಗುಣವಾಗಿ ಅಂತಃಕರಣವಾಸಿಯಾದ ನಾನೇ ಸರ್ವಸಂಶಯ ನಿವಾರಕನೆಂದು ವ್ಯಕ್ತವಾಗುತ್ತದೆ. ಯಾರು ನನ್ನ ದರ್ಶನ ಭಾಷಣಾದಿಗಳಿಂದ ಕೃತಾರ್ಥರಾಗುತ್ತಾರೋ ಅವರಿಗೆ ಯಾವ ವಿಧವಾದ ಸಂಶಯವೂ ಉಂಟಾಗಲಾರದು. ಈ ಪರಮಾರ್ಥವು—

"ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ ।
ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ॥"

ಎಂಬ ಉತ್ಕೃಷ್ಟತಮವಾದ ವಚನದಿಂದ ಸರ್ವರಿಗೂ ವೇದ್ಯವಾಗುತ್ತಿದೆಯಷ್ಟೆ. ಇದರ ಮುಖ್ಯ ತಾತ್ಪರ್ಯವೇನೆಂದರೆ—"ಯಃ ಪರಸ್ಸ ಮಹೇಶ್ವರಃ"—ಎಂಬಂತೆ ಪರಾತ್ಪರನಾದ ಭಗವಂತನೇ ಅವತೀರ್ಣನಾಗಿ ಅವರ ಶಬ್ದವಾಚ್ಯನಾಗಿ ಪರಾವರನೆಂದು ಕರೆಯಲ್ಪಡುತ್ತಾನೆ. ಅವನ ದರ್ಶನವು ಯಾರಿಗೆ ಸಾಕ್ಷಾತ್ತಾಗಿ ಲಭ್ಯವಾಗುವುದೋ ಅಂತಹ ಧನ್ಯರಿಗೆ ಹೃದಯದಲ್ಲಿರುವ ಕರ್ಮಗ್ರಂಥಿಯು ಭಿನ್ನವಾಗಿ, ಸರ್ವ ಸಂಶಯಗಳೂ ಛಿನ್ನವಾಗಿ, ಸರ್ವ ಕರ್ಮಶೇಷಗಳೂ ನಷ್ಟವಾಗುವುವು." ಈ ಪರಮರಹಸ್ಯಾರ್ಥವನ್ನು ತಿಳಿದವರು ಪರಾವರನಾದ ಶ್ರೀ ವಿಭವಾವತಾರ ಮೂರ್ತಿಯಾದ ನನ್ನ ದರ್ಶನದಿಂದ ಕೃತಾರ್ಥರಾಗಿ ಸರ್ವಸಂಶಯವಿಮುಕ್ತರಾಗಿ ದಿವ್ಯಜ್ಞಾನ ಸಂಪನ್ನರಾಗಿ ನನ್ನ ಪರಮಾನುಗ್ರಹಕ್ಕೆ ಪಾತ್ರರಾಗಿ ಉಜ್ಜೀವಿಸುವರು. ಇದೇ ಸರ್ವವೇದಾಂತ ಸಾರಾರ್ಥವು. ನಾನು ಗೀತಾಶಾಸ್ತ್ರದಲ್ಲಿ ಹೇಳಿರುವಂತೆ ಸ್ವಸ್ವ ಕುಲಧರ್ಮವೂ ಸ್ವಸ್ವಸಂಪ್ರದಾಯವೂ ಸರ್ವರಿಗೂ ಶ್ರೇಯಸ್ಕರ. ವರ್ಣಸಾಂಕರ್ಯವು ನನಗೆ ಸರ್ವದ್ಯಾಪಿ ಅನಭಿಮತವಾದುದೆಂದು ವಿವೇಕಿಗಳೆಲ್ಲರೂ ತಿಳಿದುಕೊಳ್ಳುತ್ತಾರೆ. ಅವಿವೇಕಿಗಳು ದುರ್ವಾದಗಳಂ ಮಾಡುತ್ತ ವರ್ಣಸಾಂಕರ್ಯ ಕೃತ್ಯಗಳನ್ನು ನಡೆಸಲು ಬದ್ಧದೀಕ್ಷರಾಗಿ ಅಧೋಗತಿಯಂ ಹೊಂದುತ್ತಾರೆ. ಈ ಪ್ರಕೃತ ಕಾಲದಲ್ಲಿ ಭರತ ಮಂಡಲದಲ್ಲಿ ಅನೇಕರು ಪಾಶ್ಚಾತ್ಯಾದಿ ಸಹವಾಸದಿಂದ ವರ್ಣಸಾಂಕರ್ಯದಲ್ಲಿ ಸಕ್ತರಾಗುತ್ತಿದಾರೆಂಬುದು ಅತ್ಯಂತ ಶೋಚನೀಯವಾಗಿದೆ. ಇಂತಹ ಪಾತಕಿಗಳು ತಮ್ಮ ದುಷ್ಟ ಕೃತ್ಯಗಳ ಫಲಗಳನ್ನು ಕ್ಷಿಪ್ರವಾಗಿಯೇ ಅನುಭವಿಸುವರೆಂಬುದು ಶಾಸ್ತ್ರಸಿದ್ಧವಾಗಿಯೇ ಇದೆ.

**ಆಹಾರ ಶುದ್ಧಿ**:—ವಿವಾಹಾದಿಗಳಲ್ಲಿ ವರ್ಣಸಾಂಕರ್ಯವು ಹೇಗೆ ನಿಷಿದ್ಧವೋ ಹಾಗೆಯೇ ಆಹಾರಾದಿಗಳಲ್ಲಿಯೂ ವರ್ಣ

ಸಾಂಕರ್ಯವು ಸುತರಾಂ ನಿಷಿದ್ಧವಾಗಿಯೇ ಇದೆ. ಆಹಾರ ಶುದ್ಧಿಯಿಂದ ಸತ್ತ್ವಶುದ್ಧಿಯೆಂತಲೂ, ಸತ್ತ್ವಶುದ್ಧಿಯಿಂದ ಧ್ರುವ ಸ್ಮೃತಿಯೆಂತಲೂ, ಸ್ಮೃತಿಲಂಭದಿಂದ ಸರ್ವ (ಕರ್ಮ) ಗ್ರನ್ಥಿ ಮೋಕ್ಷವೆಂತಲೂ ಶ್ರುತಿವಚನವು ಉದ್ಘೋಷಿಸುತ್ತದೆಯಷ್ಟೆ. ಆದುದರಿಂದ ಆಹಾರಶುದ್ಧಿಯು ಮೋಕ್ಷಕ್ಕೆ ಅತ್ಯಾವಶ್ಯಕವಾದುದೆಂದು ವ್ಯಕ್ತವಾಗಿದೆ. ಆಹಾರಕ್ಕೆ ತಕ್ಕಂತೆ ದೇಹವು, ದೇಹಕ್ಕೆ ತಕ್ಕಂತೆ ಮನಸ್ಸು, ಮನಸ್ಸಿಗೆ ತಕ್ಕಂತೆ ಮೋಕ್ಷವು. ಆಹಾರ ಶುದ್ಧಿಯಿಂದ ಮೋಕ್ಷಸಿದ್ಧಿಯೆಂಬ ನಿಯತಿಯು ಇದ್ದೇ ಇದೆ. ಗೀತಾಶಾಸ್ತ್ರದಲ್ಲಿ ಆಹಾರವು ತ್ರಿವಿಧವೆಂದು ಪರಿಗಣಿಸಲ್ಪಟ್ಟಿದೆಯಷ್ಟೆ. ಸಾತ್ವಿಕಾಹಾರ-ರಾಜಸಾಹಾರ-ತಾಮಸಾಹಾರ ಎಂದು ಮೂರು ವಿಧವಾದ ಆಹಾರಗಳನ್ನೂ ಅವುಗಳ ಫಲಗಳನ್ನೂ ಗೀತೆಯ ೧೭ನೆಯ ಅಧ್ಯಾಯದಲ್ಲಿ ವಿವರಿಸಿಯೇ ಇರುತ್ತೇನಲ್ಲವೆ! ಆಹಾರ ದೋಷಗಳು ತ್ರಿವಿಧವಾಗಿರುವುವು—(೧) ಜಾತಿದೋಷ (೨) ಆಶ್ರಯದೋಷ (೩) ನಿಮಿತ್ತದೋಷ. ಜಾತಿದುಷ್ಟಗಳು ಲಶುನಾದಿಗಳು, ಮದ್ಯಮಾಂಸಾದಿಗಳು. ಆಶ್ರಯ ದುಷ್ಟಗಳು ಶೂದ್ರಾದಿ ಸ್ಪರ್ಶದಿಂದಲೂ ಶೂದ್ರಾದಿ ವೀಕ್ಷಣಗಳಿಂದಲೂ ಅಸತ್ಪಾತ್ರದಿಂದಲೂ ದುಷ್ಟವಾದುವು. ನಿಮಿತ್ತ ದುಷ್ಟಗಳು—ಉಚ್ಛಿಷ್ಟಾದಿ ದೋಷಗಳಿಂದಲೂ ಅಶುಚಿ ವಸ್ತು ಸ್ಪರ್ಶಾದಿಗಳಿಂದಲೂ ಕಾಕ ಗೃಧ್ರ ಶುನಕಾದಿ ಸ್ಪರ್ಶಗಳಿಂದಲೂ, ಕಾಲದೇಶಾದಿ ದೋಷಗಳಿಂದಲೂ, ದುರ್ದಾನಾದಿ ದೋಷಗಳಿಂದಲೂ ಕೂಡಿದುವು. ಇಂತಹ ದೋಷಗಳನ್ನೆಲ್ಲಾ ಪರಿಹರಿಸಿ, ಶುದ್ಧರಾದ ಪಾಚಕರಿಂದ ಸಿದ್ಧವಾದ ಅನ್ನವನ್ನು ಭಕ್ತಿಯಿಂದ ಭಗವನ್ನಿವೇದನಕ್ಕೆ ಸಮರ್ಪಿಸಿ, ತದನಂತರ ಭಾಗವತೋತ್ತಮರನ್ನು ಸತ್ಕರಿಸಿ, ತಚ್ಛೇಷವನ್ನು ಸ್ವೀಕರಿಸುವುದೇ ಶಿಷ್ಟಾಚಾರ ಸತ್ಸಂಪ್ರದಾಯವೆಂದು ಮಹಾತ್ಮರೆಲ್ಲರೂ ಅಂಗೀಕರಿಸಿರುತ್ತಾರೆ. ಈ ಸಂಪ್ರ

ದಾಯಕ್ಕೆ ಅನುಗುಣವಾಗಿಯೇ ಈಗಲೂ ನಮ್ಮ ಭರತ ಮಂಡಲದಲ್ಲಿ ವೈದಿಕರಾದ ಮಹನೀಯರು ತಮ್ಮ ತಮ್ಮ ಆಹಾರಶುದ್ಧಿಯನ್ನು ಯಥಾಶಕ್ತಿ ಪರಿಪಾಲಿಸಿಕೊಂಡು ಬರುತ್ತಿದಾರೆ. ಇದು ಶ್ರೀ ಭಗವನ್ಮುಖೋಲ್ಲಾಸಕರ ವೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ಕಾಲದಲ್ಲಿ ಕೆಲವರು ಪರಸ್ಪರ ಮೈತ್ರಿಯು ಆಹಾರದಿಂದ ಸಿದ್ಧವಾಗುವುದೆಂದು ಭ್ರಾಂತರಾಗಿ ವಿವಾಹಾದಿಗಳನ್ನೂ ನಾನಾ ಜಾತಿ ಸಾಂಕರ್ಯಕ್ಕಾಗಿ ಬೆಳೆಸುತ್ತಾರೆ. ಇದು ಭಗವಂತನಿಗೆ ಸುತರಾಂ ಇಷ್ಟವಲ್ಲವೆಂದು ಸಿದ್ಧಾಂತಿತವಾಗಿದೆ.

## ಗೀತಾಶಾಸ್ತ್ರದಲ್ಲಿರುವ ರಾಜ್ಯತಂತ್ರದ ನೀತಿತತ್ವ

ಶ್ರೀ ಭಗವಂತನೇ ಸರ್ವ ಲೋಕಗಳಿಗೂ ಸ್ವಾಮಿಯಾದವನು. "ಮತ್ತಃ ಪರತರಂ ನಾನ್ಯತ್ ಕಿಂಚಿಸ್ತಿ ಧನಂಜಯ" ಎಂಬಂತೆ ಇವನಿಗಿಂತ ಅಧಿಕ ಮಹಿಮೆಯುಳ್ಳವರೂ ಇಲ್ಲ, ಇವನಿಗೆ ಸಮಾನರೂ ಇಲ್ಲ. ಹೀಗಿರುವಲ್ಲಿ ಪ್ರಾಯಶಃ ಈ ಭೂಲೋಕದಲ್ಲಿರುವ ದೃಪ್ತರಾದ ರಾಜರು ತಾವು ಭಗವಂತನ ಸೇವಕರೆಂದು ತಿಳಿಯದೆ ಭೂಮಂಡಲದ ಏಕದೇಶಕ್ಕೆ ಅಧಿಪತಿಗಳಾಗಿದ್ದಾಗ್ಯೂ—ತಮ್ಮನ್ನು ಭೂಪತಿಗಳೆಂದೂ ಭಾವಿಸೋಣವು ಸುತರಾಂ ಸಿದ್ಧವಾಗಿದೆ. ಇವರ ದರ್ಪವು—"ಕ್ಷೋಣೀಕೋಣಶತಾಂಶಪಾಲನಕಲಾದುರ್ವಾರ ಗರ್ವಾನಲ"—ಎಂಬಂತೆ ಅತಿದುಸ್ಸಹವಾಗಿರುವುದರಿಂದ ಮಹನೀಯರಾದ ಭಗವದ್ಭಕ್ತರು ಇವರನ್ನು ಧಿಕ್ಕರಿಸಿ ದೂರದಲ್ಲೇ ಇದ್ದುಕೊಂಡು ತಾವು ಸದ್ವಿಷಯದಲ್ಲಿ ತಮ್ಮ ಪಾಡಿಗೆ ಕಾಲವನ್ನು ಕಳೆಯುತ್ತಾರೆ. ಉದರ ಭರಣವೇ ಮುಖ್ಯವೆಂದು ತಿಳಿದುಕೊಂಡಿರುವ ಕೆಲವರು ಆ ರಾಜರನ್ನೇ ಅನುಸರಿಸಿ ಅವರನ್ನೇ ಸ್ತುತಿಸುತ್ತ ದ್ರವ್ಯಾರ್ಜನದಿಂದ ಮದಮತ್ತರಾಗುತ್ತಿದಾರೆ. ಇದು ಲೋಕದೃಷ್ಟಾಂತಗಳಿಂದ ಸ್ವತಸ್ಸಿದ್ಧವಾ

ಗಿಯೇ ಇದೆ ಪ್ರಾಯೇಣ ಭಗವದ್ಭಕ್ತರಾಗಿರುವ ವಿನಯ ಸಂಪನ್ನರಾದ ರಾಜರು ಅತ್ಯಂತ ದುರ್ಲಭರು. ರಾಜರಿಗೆ ಮಂತ್ರಿಗಳಾದವರೂ ಕೂಡ ಈ ಕಾಲದಲ್ಲಿ ಧರ್ಮೋಪದೇಶಗಳನ್ನು ಮಾಡುವಷ್ಟು ಯೋಗ್ಯರಾಗಿಯೂ ಧೀರರಾಗಿಯೂ ಇಲ್ಲವಾದುದರಿಂದ, ರಾಜರು ಧರ್ಮಪರಿಪಾಲನ ಸಕ್ತರಾಗದೆ ಉದಾಸೀನರಾಗಿಯೂ ನಾಸ್ತಿಕರಾಗಿಯೂ ಕೇವಲ ಸ್ವಾರ್ಥಪರರಾಗಿಯೂ ಇರುತ್ತಾರೆ. ಆದುದರಿಂದಲೇ ಅಡಿಗಡಿಗೆ ರಾಜರಲ್ಲಿ ಪರಸ್ಪರ ಯುದ್ಧವೂ ಅಸೂಯಾ ಮಾತ್ಸರ್ಯಾದಿಗಳಿಂದ ಕಲಹಗಳೂ ಉಂಟಾಗುತ್ತವೆ. ಪೂರ್ವಕಾಲಗಳಲ್ಲೂ ಇಂತಹ ಮಹಾಯುದ್ಧಗಳು ಆಗಾಗ್ಯೆ ಉಂಟಾಗುತ್ತಿದ್ದುವು. ಮಹಾಭಾರತ ಯುದ್ಧಕಾಲದಲ್ಲಿ ಪಾಂಡವರು ಧರ್ಮ ಪಕ್ಷಕ್ಕೆ ಸೇರಿದವರಾಗಿಯೂ, ಕೌರವರು ಅಧರ್ಮ ಪಕ್ಷಕ್ಕೆ ಸೇರಿದವರಾಗಿಯೂ ಇದ್ದುದರಿಂದ ಈ ೨ ಪಕ್ಷಗಳಿಗೂ ಮಹಾಯುದ್ಧವು ಪ್ರಾಪ್ತವಾಯಿತು. ಧರ್ಮಪಕ್ಷವಾದ ಪಾಂಡವರ ಪಕ್ಷಕ್ಕೆ ಭಗವಂತನಾದ ಶ್ರೀ ಕೃಷ್ಣನು ಸಹಾಯಭೂತನಾದನು. ಅಧರ್ಮಪಕ್ಷವಾದ ಕೌರವ ಪಕ್ಷವನ್ನು ತಾನೇ ನಾಶಪಡಿಸಿದನು—ದುರಾತ್ಮರಾದ ನಾಸ್ತಿಕರು ಪ್ರಭುತ್ವಕ್ಕೆ ಬಂದರೆ ಭಗವಂತನು ಅವರನ್ನು ದಂಡಿಸಲು ಬದ್ಧದೀಕ್ಷನಾಗಿ ತನ್ನ ಭಕ್ತರನ್ನು ರಕ್ಷಿಸುತ್ತಾನೆಂದು "ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ"—ಇತ್ಯಾದಿ ಪ್ರಮಾಣಗಳಿಂದಲೇ ವ್ಯಕ್ತವಾಗುತ್ತದೆ. ಈ ನ್ಯಾಯಕ್ಕೆ ಅನುಸಾರವಾಗಿಯೇ ಶ್ರೀಕೃಷ್ಣನು ಧರ್ಮಗ್ಲಾನಿಯ ಸಮಯದಲ್ಲಿ ಅವತರಿಸಿ ಧರ್ಮಪ್ರತಿಷ್ಠಾಪನವಂ ಮಾಡಿದನು.

ಹೀಗೆಯೇ ಇತರ ಅವತಾರಗಳ ಕಾಲಗಳಲ್ಲಿಯೂ ಆಯಾ ಕಾಲದ ದುರಾತ್ಮರನ್ನು ದಂಡಿಸಿ ಸಜ್ಜನರನ್ನು ರಕ್ಷಿಸುವುದಕ್ಕೋಸ್ಕರವೇ ಭಗವಂತನು ಅವತರಿಸುತ್ತಾನೆ. ಈ ನ್ಯಾಯಕ್ಕೆ

ತಕ್ಕಂತೆಯೇ, ಈ ಪ್ರಕೃತಕಾಲದಲ್ಲಿರುವ ಪ್ರಪಂಚದ ಸ್ಥಿತಿಗೆ ಅನುಸಾರವಾಗಿ ಶ್ರೀ ಭಗವದವತಾರವು ಪ್ರಕಾಶಿಸುತ್ತ ನಾಸ್ತಿಕರಾದ ದುರಾತ್ಮರನ್ನು ದಂಡಿಸಿ ಆಸ್ತಿಕರಾದ ಭಗವದ್ಭಕ್ತರನ್ನು ರಕ್ಷಿಸಲು ಬದ್ಧದೀಕ್ಷವಾಗಿದೆ ಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ತತ್ವವನ್ನು ಆಸ್ತಿಕರಾದ ಮಹನೀಯರೆಲ್ಲರೂ ನಂಬಿ ಇತರರಿಗೂ ಬೋಧಿಸುತ್ತ ಶ್ರೀ ಭಗವಂತನ ಅವತಾರ ವಿಷಯದಲ್ಲಿ ವಿಶ್ವಾಸಭರಿತರಾಗಿ ವಿಭೀಷಣನಂತೆ ಭಕ್ತಾಗ್ರೇಸರರಾಗಿ ಉಜ್ಜೀನಿಸುತ್ತಾರೆ. ನಾಸ್ತಿಕರಾದ ಆಸುರ ಪ್ರಕೃತಿಗಳು ಭಗವತ್ಪ್ರತಿಕೂಲರಾಗಿ ರಾವಣಾದಿಗಳಂತೆ ನಾಶವಂ ಹೊಂದುತ್ತಾರೆ. ಇದೇ ರಾಜ್ಯನೀತಿ ತತ್ವವೆಂದು ಕಾಲಾನುಗುಣವಾಗಿ ನಿರ್ಣಯಿಸಲ್ಪಟ್ಟಿದೆ. ಈ ಸಿದ್ಧಾಂತವನ್ನು ತಿಳಿದವರು ಈ ಕಾಲದಲ್ಲಿ ಭಗವದವತಾರವು ಈ ಭೂಮಂಡಲದಲ್ಲಿ ಹೇಗೆ ಇರಬೇಕೆಂದು ತಾವೇ ಪರಿಶೀಲಿಸಿ ನೋಡಬಹುದು. ಕಾಲ-ದೇಶ-ದಶಾ-ಪರಿವಾರ-ಅಧಿಕಾರಿ-ಧನಸಮ್ಪತ್ತಿ-ಬಲಾಬಲಾದಿ ಚಿನ್ಹೆಗಳನ್ನು ಮಾಡಿ ಚೆನ್ನಾಗಿ ಪರಿಶೀಲಿಸಿಯೇ ತನ್ನ ಕಾರ್ಯಗಳನ್ನು ಸಾಧಿಸಲು ತಕ್ಕ ಮಾರ್ಗಗಳನ್ನೇ ಭಗವಂತನೂ ಕೂಡ ಅನುಸರಿಸಬೇಕಾಗಿರುತ್ತದೆ. ಹಠಾತ್ತಾಗಿ ಸಾಹಸಕಾರ್ಯಗಳನ್ನು ಮಾಡಿದರೆ ಅತ್ಯಂತ ಶೋಚನೀಯವಾದ ದುಷ್ಫಲಗಳು ಉಂಟಾಗುವವು. ಇದನ್ನು ತಿಳಿಯದೆ ಮೂಢರಾದ ಕೆಲವರು ತಮ್ಮ ತಮ್ಮ ಶಕ್ತಿಯನ್ನು ಮೀರಿ ನಡೆಯುತ್ತ ಮಹಾ ವಿಪತ್ತುಗಳಿಗೆ ತಾವೂ ಗುರಿಯಾಗಿ ತಮ್ಮ ಅನುಯಾಯಿ ವರ್ಗಗಳನ್ನೂ ವೃಥಾ ಗುರಿಮಾಡುತ್ತಿದ್ದಾರೆ. ಮತ್ತು ವಿವೇಚನ ಶಕ್ತಿಯಿಲ್ಲದ ಶಿಶುಗಳನ್ನೂ ಸ್ತ್ರೀಜನರನ್ನೂ ಕೂಡ ಅಂತಹ ಮಹಾ ವಿಪತ್ತುಗಳಿಗೆ ಗುರಿಮಾಡಿ ರಾಷ್ಟ್ರದಲ್ಲಿ ಅತ್ಯಂತ ಸನ್ತಾಪವನ್ನೇ ಬೆಳೆಸುತ್ತಾರೆ. ಇದು ಭಗವಂತನಿಗೆ ಇಷ್ಟವಾದ ಮಾರ್ಗವೇ?—ಎಂದು ವಿವೇಕಿಗಳೆಲ್ಲರೂ ಪರಿ

ಶೀಲಿಸಬೇಕಾಗಿದೆ. "ನಾವಿಷ್ಣುಃ ಪೃಥಿವೀಪತಿಃ"—ಎಂಬ ವಚನಕ್ಕೆ ಅನುಗುಣವಾಗಿ ಅಂಶಭೂತವಾದ ವಿಷ್ಣುಶಕ್ತಿಯೊಡನೆ ಕೂಡಿರುವನೇ ರಾಜನು–ಎಂದು ಆಸ್ತಿಕರು ಅಂಗೀಕರಿಸಬೇಕಾಗಿದೆ. ವಿಷ್ಣುಭಕ್ತಿಯಿಲ್ಲದ ರಾಜನಿಗೆ ವಿಷ್ಣುಶಕ್ತಿ ಉಂಟಾಗ ವುದೇ? ವಿಷ್ಣುಶಕ್ತಿಯ ಅಂಶವಿಲ್ಲದಿದ್ದರೆ ರಾಜನಾಗುವನೇ? ಯಾವ ರಾಜನಿಗಾಗಲೀ ಪ್ರಭುತ್ವವು ಇರುವವರೆಗೂ ವಿಷ್ಣುಶಕ್ತಿಯ ಅಂಶವು ಇದ್ದೇ ಇದೆಯೆಂದು ಗ್ರಹಿಸಬೇಕು. ರಾವಣಾದಿಗಳಿಗೂ ಕೂಡ ಪ್ರಭುತ್ವವು ಇರುವವರೆಗೂ ಆ ಅಂಶವು ಏಕದೇಶದಲ್ಲಿತ್ತು. ಪ್ರಭುತ್ವ ನಾಶಕಾಲವು ಬಂದಾಗ ಅದು ಕ್ಷೀಣವಾಯಿತು. "ಯದ್ಯಧರ್ಮೋ ನ ಬಲವಾನ್ ಸ್ಯಾದಯಂ ರಾಕ್ಷಸೇಶ್ವರಃ। ಸ್ಯಾದಯಂ ಸುರಲೋಕಸ್ಯ ಸಶಕ್ರಸ್ಯಾಪಿರಕ್ಷಿತಾ ||"—ಎಂದು ವಿಸ್ಮಯಪಡುವಂತೆ ಮಾಡಿದ ರಾವಣನ ಸಮ್ಪತ್ತು "ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ। ತತ್ತದೇವಾವಗಚ್ಛತ್ವಂ ಮಮ ತೇಜೋಂಶಸಮ್ಭವಮ್ ।"-ಎಂದು ವಿಷ್ಣುಶಕ್ತಿಯ ಅಂಶವಲ್ಲದಿದ್ದರೆ ಉಳಿಯುತ್ತಿತ್ತೇ? ರಾವಣನಿಗೂ ದೇವತೆಗಳ ಮೂಲಕ ವರಪ್ರದಾನವನ್ನು ಮಾಡಿದವನು ಭಗವಂತನೇ ಅಲ್ಲವೇ? ಅವನನ್ನು ದಂಡಿಸಿದವನೂ ಭಗವಂತನೇ! ಆದಾಗ್ಯೂ ತಕ್ಕ ಸಮಯವನ್ನೇ ನೋಡಿ ದಂಡಿಸುವನು. ದಂಡಿಸಲು ಯಾವುದಾದರೂ ಪ್ರಬಲವಾದ ಕಾರಣವು ಉಂಟಾಗಬೇಕು. ಸುಗ್ರೀವನು ವಿಭೀಷಣನನ್ನು ಪರಿಗ್ರಹಿಸಕೂಡದೆಂದು ಶ್ರೀರಾಮನಿಗೆ ಬೋಧಿಸಿ ವಾದಿಸುತ್ತಿರುವಾಗ ಶ್ರೀರಾಮನ ಉಕ್ತಿಯು ಯಾವ ಪ್ರಕಾರದಲ್ಲಿ ಹೊರಟಿತು?—ಎಂಬುದನ್ನು ಚೆನ್ನಾಗಿ ಪರಿಶೀಲಿಸಿ ನೋಡಿರಿ.– "ವಿಭೀಷಣೋ ವಾ ಸುಗ್ರೀವ। ಯದಿ ವಾ ರಾವಣಸ್ಸ್ವಯಮ್ । ಆನಯೈನಂ ಹರಿಶ್ರೇಷ್ಠ। ದತ್ತಮಸ್ಯಾಭಯಂ ಮಯಾ॥"–ಎಂದು ಶ್ರೀರಾಮನು ಶರಣಾಗತನಾದ ವಿಭೀಷಣನಿಗೆ ಮಾತ್ರ ಅಭಯ

ಪ್ರದಾನವಂ ಮಾಡಿದುದಲ್ಲದೆ ಸಾಕ್ಷಾದ್ರಾವಣನೇ ಬಂದು ಇದ್ದರೆ ಅವನಿಗೂ ಅಭಯಪ್ರದಾನವಂ ಮಾಡಿ ಕ್ಷಮಿಸಿ ಅವನನ್ನೂ ರಕ್ಷಿಸಬೇಕೆಂಬುದೇ ಶ್ರೀರಾಮನ ಉದಾರತಮವಾದ ಅಭಿಪ್ರಾಯವಾಗಿತ್ತಷ್ಟೆ. ಇದನ್ನೆಲ್ಲಾ ಚೆನ್ನಾಗಿ ಪರಿಶೀಲಿಸಿದ ಹೊರತು ಭಗವಂತನ ಉದಾರವಾದ ಭಾವಗಳನ್ನು ಸಾಮಾನ್ಯರಾದ ಜನರು ತಿಳಿಯಲಾರರು. ವಿವೇಕಿಗಳಾದ ಮಹನೀಯರು ಭಗವಂತನಲ್ಲಿ ವೃಥಾ ದೋಷಾರೋಪವಂ ಮಾಡದೆ ಅವನ ಉದಾರಭಾವಗಳ ರಹಸ್ಯವಂ ತಿಳಿದುಕೊಂಡು ಅವನಿಗೆ ಅನುಕೂಲರಾಗಿ ಸಹಾಯಭೂತರಾಗಿ ಅವನ ಅವತಾರ ಕೃತ್ಯ ನಿರ್ವಾಹಕ್ಕೆ ತಕ್ಕ ಸಮಯಗಳಲ್ಲಿ ತಾವೂ ಪರಿವಾರಭೂತರಾಗಿದ್ದು ಅವನ ಮುಖೋಲ್ಲಾಸಕ್ಕೆ ಪಾತ್ರರಾಗುತ್ತಾರೆ. ಇದೇ ಪ್ರಕೃತಕಾಲದ ರಾಜ್ಯತಂತ್ರದ ನೀತಿತತ್ವವೆಂದು ಗೀತಾದಿ ಶಾಸ್ತ್ರಗಳಿಂದ ತಿಳಿಯಬೇಕಾಗಿದೆ. ಭಗವಂತನು ಜೀತನು ಭಾವಗಳನ್ನು ತಾನೇ ಅಂತರಾತ್ಮನಾಗಿದ್ದುಕೊಂಡು ಪರೀಕ್ಷಿಸುತ್ತ, ಬಹಿರಂಗದಲ್ಲಿಯೂ ಅವರನ್ನು ಸಾಕ್ಷಾತ್ತಾಗಿ ಕೆಲವು ಉಪಾಯಗಳಿಂದ ಪರೀಕ್ಷಿಸುತ್ತಾನೆಂದು ನಾಮನಾವತಾರಾದಿ ಚರಿತ್ರೆಗಳಿಂದ ವ್ಯಕ್ತವಾಗುತ್ತದೆಯಷ್ಟೆ. ಆದುದರಿಂದ ಭಗವಂತನ ಅತಿಮಾನುಷ ವ್ಯಾಪಾರಗಳ ರಹಸ್ಯವನ್ನು ಸಾಮಾನ್ಯರು ತಿಳಿಯಲಾರರು. ಪ್ರಾಜ್ಞರಾದ ಮಹನೀಯರು ಈ ರಹಸ್ಯವನ್ನು ತಿಳಿದು ಇತರರಿಗೂ ಬೋಧಿಸುತ್ತ ರಾಷ್ಟ್ರದಲ್ಲಿ ಶಾಂತಿ-ಪುಷ್ಟಿ-ತುಷ್ಟಿಗಳು ಬೆಳೆಯುವಂತೆಯೂ, ಕೃತಯುಗ ಧರ್ಮಗಳೂ ಬೆಳೆಯುವಂತೆಯೂ ಮಾಡಿ ಭಗವತ್ಪ್ರಿಯತಮರಾಗುವರು. ಇದೇ ಸಕಲ ಶಾಸ್ತ್ರಾರ್ಥಸಾರವು.

---

ಶ್ರೀ

೭ನೆಯ ಪ್ರಕರಣ

## ಗೀತಾಶಾಸ್ತ್ರದಲ್ಲಿರುವ ಅವತಾರ ರಹಸ್ಯ

ಶ್ರೀ ಭಗವಂತನ ಅವತಾರ ರಹಸ್ಯವು ಅತ್ಯಂತ ಗೋಪ್ಯವಾಗಿಯೇ ಇದೆ. ಶ್ರೀರಾಮಾಯಣದಲ್ಲಿ ರಾಮಾವತಾರ ರಹಸ್ಯವೂ ಭಾಗವತ-ಹರಿವಂಶಾದಿಗಳಲ್ಲಿ ಕೃಷ್ಣಾವತಾರ ರಹಸ್ಯವೂ ಪ್ರಕಾಶಿಸುವುದಾಗಿ ಕೆಲವರು ಭಾವಿಸಿದರೂ, ವಾಲ್ಮೀಕಿ-ವ್ಯಾಸಾದಿ ಮಹರ್ಷಿಗಳೇ ಅವತಾರ ರಹಸ್ಯವು ದುರವಗಾಹವೆಂದು ತಾವೇ ಅನೇಕಾವೃತ್ತಿ ಉದ್ಘೋಷಿಸಿರುತ್ತಾರೆ. ಅವತಾರ ಚರಿತ್ರೆಗಳಿಂದ ಅವತಾರ ರಹಸ್ಯವು ಚೆನ್ನಾಗಿ ವ್ಯಕ್ತವಾಗಲಾರದು. ಸಾಕ್ಷಾತ್ ಸರ್ವೇಶ್ವರನಾದ ಭಗವಂತನು ಈ ಭೂಲೋಕದಲ್ಲಿ ಯಾವ ಉದ್ದೇಶಗಳಿಂದ ಅವತರಿಸುತ್ತಾನೆಂಬುದು ಗೀತಾಶಾಸ್ತ್ರದಲ್ಲಿ ಸಂಕ್ಷೇಪವಾಗಿ ಸೂಚಿಸಲ್ಪಟ್ಟಿದೆ. ಗೀತೆಯ ನಾಲ್ಕನೆಯ ಅಧ್ಯಾಯದ ೭ನೆಯ ಶ್ಲೋಕದಲ್ಲಿ—ಧರ್ಮಕ್ಕೆ ಅತ್ಯಂತ ಗ್ಲಾನಿಯೂ ಅಧರ್ಮಕ್ಕೆ ಅಭ್ಯುತ್ಥಾನವೂ ಯಾವಾಗ ಉಂಟಾಗುವುದೋ ಆಗ ಭಗವಂತನು ಈ ಲೋಕದಲ್ಲಿ ಅವತರಿಸುತ್ತಾನೆಂದು ಅವತಾರ ಸಮಯವು ಸೂಚಿಸಲ್ಪಟ್ಟಿದೆ. ಅದೇ ಅಧ್ಯಾಯದ ೮ನೆಯ ಶ್ಲೋಕದಲ್ಲಿ--ಸಾಧುಪರಿತ್ರಾಣ, ದುಷ್ಕೃದ್ವಿನಾಶ, ಧರ್ಮಪ್ರತಿಷ್ಠಾಪನ-ಎಂಬೀ ಮೂರು ಉದ್ದೇಶಗಳು ಅವತಾರಗಳಿಗೆಲ್ಲಾ ಸಾಮಾನ್ಯವಾಗಿ ಪ್ರಕಾಶಿಸುತ್ತವೆಯೆಂದು ಸೂಚಿಸಲ್ಪಟ್ಟಿದೆ. ಆದಾಗ್ಯೂ ಯಾವ ಯಾವ ಯುಗಗಳಲ್ಲಿ ಯಾವ ಯಾವ ಕಾಲಗಳಲ್ಲಿ ಯಾವ

ಯಾವ ಅವತಾರಗಳೆಂದು ನಿರ್ಣಯಿಸಲು ತಕ್ಕ ಸಾಧನಗಳು ಸಿಕ್ಕುವುದಿಲ್ಲ. ಆದುದರಿಂದಲೇ ಶ್ರೀರಾಮಾನುಜಾಚಾರ್ಯ ವಿರಚಿತವಾದ ಗೀತಾಭಾಷ್ಯದಲ್ಲಿ—" ನ ಕಾಲನಿಯಮೋಽಸ್ಮತ್ಸಂಭವಸ್ಯ," " ಕೃತತ್ರೇತಾದಿಯುಗವಿಶೇಷನಿಯಮೋಽಪಿ ನಾಸ್ತಿ"—ಎಂದು ಈ ಪ್ರಕರಣದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿದೆ. ಇದರಿಂದ ನಾವು ತಿಳಿಯಬೇಕಾದ ಮುಖ್ಯವಾದ ಅಂಶವೇನೆಂದರೆ— ಭಗವಂತನೇ ತನ್ನ ಅವತಾರ ಕಾಲವನ್ನು ತಾನು ತಿಳಿದುಕೊಂಡು ಅಧರ್ಮಾಭ್ಯುತ್ಥಾನ ಕಾಲದಲ್ಲಿ ಧರ್ಮಪ್ರತಿಷ್ಠಾಪನೆಗೋಸ್ಕರ ತಾನೇ ಅವತರಿಸಿ ದುಷ್ಟನಿಗ್ರಹವಂ ಮಾಡಿ ಸಾಧುಪರಿತ್ರಾಣವಂ ಮಾಡುತ್ತಾನೆಂಬುದೇ. ಈ ಅವತಾರ ಕಾಲವನ್ನು ಸರಿಯಾಗಿ ಗಣನೆಮಾಡಿ ನಿರ್ಣಯಿಸಲು ಚೇತನರಿಗೆ ಪ್ರಾಯೇಣ ಸಾಧನಸಮ್ಪತ್ತಿಯು ಸಾಲದೆ ಇದೆಯೆಂದೂ ಇದರಿಂದಲೇ ವ್ಯಕ್ತವಾಗಿದೆ.

ಈ ಲೋಕದಲ್ಲಿ ವಾಸವಾಗಿದ್ದ ಜನರು—ಶ್ರೀರಾಮಾವತಾರವು ಇಂತಹ ಸಮಯದಲ್ಲಿ ಉಂಟಾಗುವುದೆಂದು ಮೊದಲೇ ನಿರ್ಣಯಿಸಿ ತಿಳಿದುಕೊಂಡಿದ್ದರೆ? ಶ್ರೀಕೃಷ್ಣಾವತಾರವು ಇಂತಹ ವರ್ಷದಲ್ಲಿ ಬರುವುದೆಂದು ನಿರ್ಣಯಿಸಿ ಇದ್ದರೆ? ಹಾಗೆಯೇ ಬುದ್ಧಾವತಾರ ಕಾಲವನ್ನು ಮೊದಲೇ ನಿರ್ಣಯಿಸಿ ಇದ್ದರೆ?—ಎಂಬ ವಿಚಾರಗಳನ್ನು ಮಾಡಿದರೆ, ಅವತಾರ ಸಮಯಾದಿ ರಹಸ್ಯವು ಪ್ರಾಯೇಣ ಗೋಪ್ಯವಾಗಿಯೇ ಇತ್ತೆಂದು ತೋರುತ್ತದೆ. ಆದಾಗ್ಯೂ ಪುರಾಣಗಳಲ್ಲಿ ಭವಿಷ್ಯತ್ಕಾಲ ಚರಿತ್ರವು ಅಲ್ಲಲ್ಲಿ ಪೂರ್ವದಲ್ಲಿಯೇ ಸೂಚಿತವಾಗಿರುವುದುಂಟು. ಅದೇ ರೀತಿಯಲ್ಲಿ ಈಗ ಈ ಲೋಕದಲ್ಲಿ ಕಲಿಧ್ವಂಸವಾಗಿ ಕೃತಯುಗಾರಂಭವಾಗುವ ಸಮಯದಲ್ಲಿ ಶ್ರೀ ಕಲ್ಕಿಯ ಅವತಾರವಾಗಿದೆ ಯೆಂದು ಎಲ್ಲರೂ ನಿರ್ಣಯಿಸಬಹುದೆಂದು ಪರಾಶರ-ವ್ಯಾಸಾದಿ ಮಹರ್ಷಿಗಳಿಂದಲೇ ತಮ್ಮ ದಿವ್ಯಜ್ಞಾನದಿಂದ ವಿಷ್ಣುಪುರಾಣ ಭಾಗವತಾದಿಗಳಲ್ಲಿ ಸೂಚಿತವಾಗಿದೆ.

ಶ್ರೀರಾಮಾವತಾರಕ್ಕೆ ಉದ್ದೇಶವು ಮುಖ್ಯವಾಗಿ ರಾವಣ ಕುಂಭಕರ್ಣಾದಿ ರಾಕ್ಷಸ ವಧವೆಂತಲೂ, ಶ್ರೀಕೃಷ್ಣಾವತಾರಕ್ಕೆ ಮುಖ್ಯೋದ್ದೇಶವು ಕಂಸ-ಶಿಶುಪಾಲ-ದಂತವಕ್ತ್ರಾದಿ ವಧವೆಂತಲೂ, ಬುದ್ಧಾವತಾರಕ್ಕೆ ಮುಖ್ಯೋದ್ದೇಶವು ಪಶುಹಿಂಸಾದಿ ಘೋರಕೃತ್ಯದ ನಿವಾರಣವೆಂತಲೂ, ಶ್ರೀಕಲ್ಕಿ ರೂಪಿಯಾದ ಭಗವಂತನ ಅವತಾರಕ್ಕೆ ಮುಖ್ಯೋದ್ದೇಶವು ಕಲಿಧ್ವಂಸ ಪೂರ್ವಕವಾದ ಕೃತಯುಗ ಪ್ರತಿಷ್ಠಾಪನವೆಂತಲೂ—ಅನೇಕ ಪ್ರಮಾಣಗಳಿಂದ ವ್ಯಕ್ತವಾಗಿರುವುದರಿಂದ, ಪ್ರಕೃತ ಸಮಯವನ್ನು ಅನುಸರಿಸಿ ಗೀತಾದಿ ಶಾಸ್ತ್ರ ರೀತ್ಯಾ ಅಧರ್ಮಾತ್ಮಕತ್ವವು ಈಗ ಈ ಲೋಕದಲ್ಲಿ ಕಾಣುವುದರಿಂದ ಧರ್ಮಪ್ರತಿಷ್ಠಾಪನಕ್ಕಾಗಿ ಭಗವಂತನು ಶ್ರೀ ಕಲ್ಕಿರೂಪಿಯಾಗಿ ಅವತರಿಸಿ,"ಕೃತೇ ಚ ನಾರಸಿಂಹಸ್ಸ್ಯಾತ್"—ಎಂಬ ಪ್ರಮಾಣಕ್ಕೆ ಅನುಗುಣವಾಗಿ ತಾನೇ ಕಲಿಧ್ವಂಸ ಪೂರ್ವಕವಾದ ಕೃತಯುಗ ಪ್ರತಿಷ್ಠಾಪನವಂ ಮಾಡುವ ನರಸಿಂಹಸ್ವಾಮಿಯಾಗಿ ಪ್ರಕಾಶಿಸುತ್ತಾನೆಂದು ಎಲ್ಲರೂ ಇವನಲ್ಲಿ ಅವಶ್ಯವಾಗಿ ವಿಶ್ವಾಸವಂ ಮಾಡಿ ಆಸ್ತಿಕಾಗ್ರೇಸರರಾಗಿ ಕೈಂಕರ್ಯನಿಷ್ಠರಾಗಿ ಕೃತಾರ್ಥರಾಗಬೇಕು. ಅವಿಶ್ವಾಸದಿಂದ ದುರ್ವಾದಗಳಂ ಮಾಡುವವರೆಲ್ಲರೂ ನಾಸ್ತಿಕರೆಂದು ಸ್ವತಃ ಸಿದ್ಧವಾಗುವುದಷ್ಟೆ. ಆಸುರಪ್ರಕೃತಿಗಳೆಲ್ಲರೂ ಪ್ರಾಯೇಣ ಅಸೂಯಾಮಾತ್ಸರಗ್ರಸ್ತರಾಗಿ ಶ್ರೀಭಗವದವತಾರ ಮಹಾಪುರುಷನಲ್ಲಿಯೂ ದೋಷಾರೋಪಣಗಳಂ ಮಾಡುತ್ತ ಅವನ ಮಾಹಾತ್ಮ್ಯವನ್ನು ಪರಿಭವಿಸಿ ಪರಿಹಾಸಮಾಡುತ್ತ ಶಿಶುಪಾಲಾದಿಗಳಂತೆ ನಾಸ್ತಿಕರಾಗಿ ದಣ್ಡನೀಯರಾಗುವರು. ಈ ಕಾಲಕ್ಕೆ ತಕ್ಕಂತೆ ವಾಗ್ರೂಪವಾದ ಖಡ್ಗವೇ ಅಂತಹ ನಾಸ್ತಿಕರನ್ನು ಖಂಡಿಸಲು ಸಾಕಾಗಿದೆಯಷ್ಟೆ. ಪೂರ್ವಕಾಲದಂತೆ ಯುದ್ಧಮಾಡಿ ನಾಸ್ತಿಕರನ್ನು ಧ್ವಂಸಮಾಡಬೇಕಾದ ಆವಶ್ಯಕತೆಯು ಈಗ ಇರಲಾರದೆಂದು ನಂಬಿ, ಶ್ರೀಕಲ್ಕಿ ನಾರಸಿಂಹಮೂರ್ತಿಯಾದ ನಾನು ಶಾಪವಾಗ್ರೂಪ

ವಾದ ಖಡ್ಗವನ್ನು ಅತ್ಯಾವಶ್ಯಕವಾದ ವಿಷಯಗಳಲ್ಲಿ ಪ್ರಯೋಗಿಸಿ, ಸದುಪದೇಶಗಳಿಂದಲೇ ಸಕಲ ಲೋಕಗಳನ್ನೂ ಜಯಿಸಲು ಬದ್ಧ ಕಂಕಣನಾಗಿದೇನೆ. ಈ ನನ್ನ ಉದ್ದೇಶವನ್ನು ಸಫಲಮಾಡುವ ಮಹನೀಯರೇ ಆಸ್ತಿಕಾಗ್ರೇಸರರು. ಇವರೇ ನನಗೆ ಪ್ರಿಯತಮರಾದ ಭಕ್ತೋತ್ತಮರು. ನನ್ನ ಅವತಾರ ಮಾಹಾತ್ಮ್ಯವನ್ನು ಪ್ರಕಾಶ ಪಡಿಸುವವರೆಲ್ಲರೂ ನನಗೆ ಅತ್ಯಂತ ಪ್ರಿಯರೆಂದು ನಾನು ಭಾವಿಸಿ ಇರುತ್ತೇನೆ.

ಈ ಭರತಖಂಡದ ಜನರಲ್ಲಿ ಅನೇಕರು ಅವತಾರಗಳಲ್ಲಿ ವಿಶ್ವಾಸವುಳ್ಳ ಸಂಪ್ರದಾಯಗಳಿಗೆ ಸೇರಿದವರು. ದ್ವೈತಾದ್ವೈತ ವಿಶಿಷ್ಟಾದ್ವೈತಾದಿ ಮತಸ್ಥರೆಲ್ಲರೂ ಅವತಾರಗಳಲ್ಲಿ ವಿಶ್ವಾಸವುಳ್ಳವರು. ಜೈನ ಬೌದ್ಧಾದಿ ಮತಸ್ಥರೂ ಕೂಡ ಅವತಾರಗಳನ್ನು ಅಂಗೀಕರಿಸಿಯೇ ಇರುತ್ತಾರೆ. ಬಾಹ್ಯದೇಶಗಳಿಗೆ ಸೇರಿದವರೂ ಕೂಡ ಪೂರ್ವಕಾಲದಲ್ಲಿ ಭಗವದವತಾರಗಳಲ್ಲಿ ವಿಶ್ವಾಸವುಳ್ಳವರಾಗಿಯೇ ಇದ್ದು ಈಚೆಗೆ ಅವಿಶ್ವಾಸಪರರಾಗಿರುತ್ತಾರೆಂದು ಅವರವರ ಗ್ರಂಥಗಳಿಂದ ವ್ಯಕ್ತವಾಗುತ್ತದೆ. ಭಗವಂತನು ತನ್ನ ಭಕ್ತರಿಗೆ ಅನುಗ್ರಹವಂ ಮಾಡುವುದಕ್ಕೆ ಪ್ರತ್ಯಕ್ಷನಾಗಿ ರೂಪದೊಡನೆ ಬಂದು ಸಂಭಾಷಣಾದಿಗಳಂ ಮಾಡಿ ಅನುಗ್ರಹಿಸುತ್ತಿದ್ದನೆಂದು ಕೊರಾನ್ ಬೈಬಲ್ ಮುಂತಾದ ಪುಸ್ತಕಗಳಲ್ಲಿಯೂ ಪ್ರಮಾಣಗಳಿವೆ. ಆದುದರಿಂದ ಭಗವಂತನಿಗೆ ನಾಮರೂಪಾದಿಗಳು ಇಲ್ಲವೆಂದು ವಾದಿಸುವ ನವೀನ ಬಾಹ್ಯಮತಸ್ಥರು ಸ್ವಸ್ವಮತಗಳಿಗೆ ವಿರೋಧಿಗಳೆಂದು ಹೇಳಬೇಕಾಗಿದೆ. ಅಂತಹ ನಾಸ್ತಿಕರೂ ಕೂಡ ಈಚೆಗೆ ಕ್ರಮೇಣ ಅವತಾರಗಳಲ್ಲಿ ವಿಶ್ವಾಸದಿಂದ ಆಸ್ತಿಕರಾಗುತ್ತಿರುವುದು ನಮಗೆ ಅತ್ಯಂತ ಸಂತೋಷಕರವಾಗಿದೆ.

ಲೋಕಕಂಟಕರಾದ ರಾಕ್ಷಸರನ್ನು ದಂಡಿಸಿ ಸಜ್ಜನರನ್ನು ಪರಿಪಾಲಿಸುವುದಕ್ಕಾಗಿ ಭಗವಂತನು ಕ್ಷೀರಾಬ್ಧಿ ತೀರದಲ್ಲಿ ದೇವತೆ

ಗಳು ಮೊರೆಯಿಡುವಾಗ ಅಭಯವನ್ನಿತ್ತು ಅದೇ ಪ್ರಕಾರ ಆಯಾ ಸಮಯಗಳಲ್ಲಿ ಈ ಲೋಕದಲ್ಲಿ ಅವತರಿಸುತ್ತಾನೆಂದು ಈ ಭರತ ಮಂಡಲದ ಆಸ್ತಿಕರೆಲ್ಲರೂ ವಿಶ್ವಾಸವುಳ್ಳವರಾಗಿದ್ದಾರೆ. ಮತ್ತು ಭಗವಂತನ ಆಯಾ ಅವತಾರಕಾಲಗಳಲ್ಲಿ ಅನೇಕಮಂದಿ ಭಕ್ತೋತ್ತಮರು ಈ ಲೋಕದಲ್ಲಿ ಭಗವಂತನಿಗೆ ಬಂಧುಗಳಾಗಿಯೂ, ಭೃತ್ಯರಾಗಿಯೂ, ಸುಹೃದ್ವರ್ಗಾದಿಗಳಾಗಿಯೂ ಇದ್ದು ಅನೇಕ ಪ್ರಕಾರಗಳಲ್ಲಿ ಉಪಚರಿಸಿ ಕೈಂಕರ್ಯಾದಿಗಳಂ ಮಾಡಿ ಕೃತಾರ್ಥರಾದರೆಂದು ಪ್ರಹ್ಲಾದ-ವಿಭೀಷಣ-ಶಬರೀ-ಗುಹ-ಕುಬ್ಜಾ ಮಾಲಾಕಾರ ಕುಚೇಲ-ವಿದುರ-ಸುಗ್ರೀವ-ಹನುಮದಾದಿಗಳ ಚರಿತ್ರಗಳಿಂದಲೂ ಗೋಪೀಜನ-ಪಂಚಪಾಂಡವಾದಿಗಳ ಚರಿತ್ರಗಳಿಂದಲೂ ವ್ಯಕ್ತವಾಗಿದೆಯಷ್ಟೆ. ಅದೇ ಪ್ರಕಾರ ಈಗಲೂ ಶ್ರೀಕಲ್ಕಿ ನಾರಸಿಂಹಾವತಾರ ಮೂರ್ತಿಯಾದ ನನ್ನಲ್ಲಿ ವಿಶ್ವಾಸವುಳ್ಳ ಭಕ್ತೋತ್ತಮರೆಲ್ಲರೂ ಯಥಾಶಕ್ತಿ ಸರ್ವವಿಧ ಕೈಂಕರ್ಯಗಳನ್ನೂ ಮಾಡಿ ಕೃತಾರ್ಥರಾಗುವರೆಂದು ನಂಬಿ ಇರುತ್ತೇನೆ.

ನನ್ನ ಅವತಾರ ವಿಷಯದಲ್ಲಿ ಇನ್ನೂ ವಿಶ್ವಾಸವಿಲ್ಲದವರನ್ನು ಕುರಿತು ಹೇಳಬೇಕಾದ ಒಂದು ಮಾತು ಇದೆ. ಅದ್ಯಾಪಿ-ಹಿಂದಿನ ಅವತಾರಗಳ ರಹಸ್ಯವು ಗೋಪ್ಯವಾಗಿಯೇ ಅತ್ಯಂತ ದುರವಗಾಹವಾಗಿಯೇ ಇದೆಯಷ್ಟೆ. ಶ್ರೀರಾಮಾವತಾರದಲ್ಲಿ ಸರ್ವೇಶ್ವರನಾದ ರಾಮನಿಗೆ ಮಾಯಾಮೃಗವಿಷಯದಲ್ಲಿ ಮೋಹವೂ ಸೀತಾಪಹಾರದಿಂದ ಶೋಕವೂ ಉಂಟಾಗಲು ಕಾರಣವೇನು? ಶ್ರೀಕೃಷ್ಣಾವತಾರದಲ್ಲಿ ನವನೀತಚೌರ್ಯಾದಿ ಲೀಲೆಗಳಿಗೂ ಗೋಪೀವಿಹಾರಾದಿ ರಾಸಕ್ರೀಡಾದಿ ಚೇಷ್ಟಿತಗಳಿಗೂ ತಾತ್ಪರ್ಯವೇನು? ಹೀಗೆಯೇ ಪೂರ್ವಾವತಾರಗಳಲ್ಲಿ ಇನ್ನೂ ಅನೇಕವಿಧವಾದ ಅತಿಮಾನುಷ ವ್ಯಾಪಾರಗಳಿಗೆಲ್ಲಾ ಕಾರಣಗಳನ್ನು ಪರಿಶೀಲಿಸುತ್ತ ಹೋದರೆ, ಅವತಾರ ರಹಸ್ಯವು ಅತ್ಯಂತ ಗೋಪ್ಯವೆಂದೇ ಹೇಳಬೇಕಾಗಿದೆ.

ಈ ಪ್ರಕಾರವೇ ಈಗ ಶ್ರೀಕಲ್ಕಿ ನಾರಸಿಂಹಾವತಾರ ಮೂರ್ತಿಯಾದ ನನ್ನ ವ್ಯಾಪಾರಗಳಲ್ಲಿಯೂ ಅನೇಕ ವಿಧವಾದ ಅವತಾರ ರಹಸ್ಯವು ಇದ್ದೇಇದೆಯೆಂದು ವಿವೇಕಿಗಳೆಲ್ಲರೂ ಅಂಗೀಕರಿಸಬೇಕಾಗಿದೆ. ಆದುದರಿಂದ ಎಲ್ಲರೂ ನನ್ನಲ್ಲಿ ದೋಷಾರೋಪಣವಂ ಮಾಡದೆ ವಿಶ್ವಾಸವುಳ್ಳವರಾಗಿ ಕೈಂಕರ್ಯನಿಷ್ಠರಾಗಿ ಕೃತಾರ್ಥರಾಗಬೇಕು.

---

ಶ್ರೀ

೮ ನೆಯ ಪ್ರಕರಣ

## ಶ್ರೀಕೃಷ್ಣಾವತಾರದ ಪ್ರಾಶಸ್ತ್ಯ

ಪೂರ್ವಾವತಾರಗಳ ಚರಿತ್ರಗಳನ್ನೆಲ್ಲಾ ಹೋಲಿಸಿ ನೋಡಿದರೆ ಶ್ರೀಕೃಷ್ಣಾವತಾರಕ್ಕೆ ಉಂಟಾಗಿರುವ ಪ್ರಾಶಸ್ತ್ಯವು ಇನ್ನು ಯಾವ ಅವತಾರಕ್ಕೂ ಇಲ್ಲವೆಂದು ಹೇಳಬೇಕಾಗಿದೆ. ಮತ್ಸ್ಯ-ಕೂರ್ಮ-ವರಾಹ-ನಾರಸಿಂಹ-ವಾಮನ-ಪರಶುರಾಮ ಎಂಬ ೬ ಅವತಾರಗಳ ಚರಿತ್ರಗಳನ್ನೂ ಪುರಾಣೇತಿಹಾಸಗಳಲ್ಲಿ ಪರಾಶರ ವ್ಯಾಸಾದಿ ಮಹರ್ಷಿಗಳು ಸಂಗ್ರಹೇಣ ವರ್ಣಿಸಿ ಇರುತ್ತಾರೆ. ಶ್ರೀ ವಾಲ್ಮೀಕಿ ಮಹರ್ಷಿಯು ಶ್ರೀರಾಮಾವತಾರದ ಚರಿತ್ರವನ್ನು ವಿಸ್ತರೇಣ ಪ್ರತಿಪಾದಿಸುವುದಕ್ಕಾಗಿ ೨೪,೦೦೦ ಗ್ರಂಥಗಳುಳ್ಳ ಶ್ರೀರಾಮಾಯಣವನ್ನು

ರಚಿಸಿರುವುದು ಲೋಕಪ್ರಸಿದ್ಧವಾಗಿಯೇ ಇದೆಯಷ್ಟೆ. ವಾಲ್ಮೀಕಿ-ನಾರದ ಸಂವಾದದಲ್ಲಿ ವಾಲ್ಮೀಕಿಯು ನಾರದರನ್ನು ನೋಡಿ "ಈ ಲೋಕದಲ್ಲಿ ಯಾರು ಈ ಕಾಲದಲ್ಲಿ ಅತ್ಯಂತ ಪ್ರಖ್ಯಾತನಾದ ಗುಣಶಾಲಿಯೂ ವೀರ್ಯವಂತನೂ ಆಗಿರುವ ರಾಜನು?"—ಎಂದು ಪ್ರಶ್ನೆಮಾಡಲು, ನಾರದರು ಶ್ರೀರಾಮನ ಗುಣಾತಿಶಯವನ್ನೆಲ್ಲಾ ವರ್ಣಿಸಿ ಶ್ರೀರಾಮನು ಭಗವಂತನ ಅವತಾರಮೂರ್ತಿಯೆಂದು ತಿಳಿಸಿ ಶ್ರೀರಾಮ ಚರಿತ್ರವನ್ನು ಪ್ರಬಂಧರೂಪೇಣ ರಚಿಸುವಂತೆ ವಾಲ್ಮೀಕಿ ಮಹರ್ಷಿಗೆ ಆಜ್ಞಾಪಿಸಿದರು. ನಾರದರ ಅನುಗ್ರಹದಿಂದ ದಿವ್ಯ ಜ್ಞಾನವಂ ಪಡೆದ ವಾಲ್ಮೀಕಿ ಮುನಿಯು ಶ್ರೀರಾಮನ ಚರಿತ್ರವನ್ನೆಲ್ಲಾ ಕರತಲಾಮಲಕವಾಗುವಂತೆ ಸಾಕ್ಷಾತ್ಕರಿಸಿ ಲೋಕೋಜ್ಜೀವನಕ್ಕಾಗಿ ಶ್ರೀರಾಮಾಯಣವನ್ನು ರಚಿಸಿ, ಶ್ರೀರಾಮನ ಗುಣಾತಿಶಯವನ್ನೂ ಸೀತಾದೇವಿಯ ಮಾಹಾತ್ಮ್ಯವನ್ನೂ, ಲಕ್ಷ್ಮಣ-ಭರತ-ಶತ್ರುಘ್ನ-ಸುಗ್ರೀವ-ಹನುಮಾರ್-ವಿಭೀಷಣಾದಿ ಭಕ್ತವರ್ಗಗಳ ಗುಣಗಳನ್ನೂ ವರ್ಣಿಸಿ ಇರುವುದು ಸರ್ವಜನವಿದಿತವಾಗಿಯೇ ಇದೆ. ಶ್ರೀರಾಮನನ್ನು ವಾಲ್ಮೀಕಿ ಮಹರ್ಷಿಯು ವರ್ಣಿಸಿರುವ ಪ್ರಕಾರಗಳಿಂದ ನಾವು ತಿಳಿಯಬಹುದಾದ ಸಾರಾಂಶವೇನೆಂದರೆ—ಕೋದಂಡಪಾಣಿಯಾದ ವೀರಾಗ್ರಗಣ್ಯನು-ಸತ್ಯಪ್ರತಿಜ್ಞನು-ಸಕಲ ಸದ್ಗುಣಸಂಪನ್ನನು-ಪಿತೃವಾಕ್ಯಪರಿಪಾಲನಾದಿ ಧರ್ಮಗಳನ್ನು ಆಚರಿಸಿ ತಪೋವನವಾಸಿಗಳಾದ ಋಷಿಗಳ ಸಂತಾಪಗಳನ್ನು ಪರಿಹರಿಸುವುದಕ್ಕಾಗಿ ತಾನೇ ಅರಣ್ಯವಾಸವಂ ಚಿರಕಾಲದವರೆಗೆ ಮಾಡುತ್ತ ಸೀತಾಪಹಾರ ನಿಮಿತ್ತವಾದ ಶೋಕವನ್ನೆಲ್ಲಾ ತಾನೇ ಅನುಭವಿಸಿ ಲಕ್ಷ್ಮಣಸಹಿತನಾಗಿ ಅರಣ್ಯರೋದನವಂ ಮಾಡಿ, ಕ್ರಮೇಣ ಸುಗ್ರೀವಸಖ್ಯದಿಂದ ಆಂಜನೇಯ ದ್ವಾರಾ ಸೀತಾವೃತ್ತಾಂತವಂ ತಿಳಿದು ವಾನರ ಸೇನಾಸಮೇತನಾಗಿ ಸೇತುಬಂಧನವಂ ಮಾಡಿ ಲಂಕಾಪ್ರವೇಶವಂ ಮಾಡಿ ಶರಣಾಗತನಾದ ವಿಭೀಷಣನಿಗೆ ಅಭಯಪ್ರದಾ

ನವಂ ಮಾಡಿ ರಾವಣ ಕುಂಭಕರ್ಣಾದಿ ರಾಕ್ಷಸಾಧಮರನ್ನೆಲ್ಲಾ ನಾಶಪಡಿಸಿ ವಿಭೀಷಣನಿಗೆ ಪಟ್ಟಾಭಿಷೇಕವಂ ಕಟ್ಟಿ ಪುಷ್ಪಕವಿಮಾನದಿಂದ ಸೀತಾಲಕ್ಷ್ಮಣಾದಿಸಮೇತನಾಗಿ ಅಯೋಧ್ಯಾ ನಗರವಂ ಹೊಂದಿ ಪಟ್ಟಾಭಿಷಿಕ್ತನಾಗಿ ಚಿರಕಾಲ ರಾಜ್ಯವನ್ನು ಸುಖದಿಂದ ಪರಿಪಾಲಿಸುತ್ತಿದ್ದನು. ಶ್ರೀರಾಮರಾಜ್ಯವು ನಿಷ್ಕಂಟಕವಾಗಿ ಪ್ರಜೆಗಳಿಗೆ ಸರ್ವವಿಧ ಸೌಖ್ಯಗಳನ್ನೂ ಉಂಟುಮಾಡುತ್ತ-ಅದ್ಯಾಪಿ ರಾಮರಾಜ್ಯವೆಂದರೆ ಸರ್ವವಿಧ ಸೌಖ್ಯಯುಕ್ತವಾದ ರಾಜ್ಯವೆಂದು ಲೋಕಪ್ರಸಿದ್ಧಿಯಾಗುವಂತೆ ಕೊಂಡಾಡಲ್ಪಟ್ಟಿತೆಂದು ಜಗದ್ವಿಖ್ಯಾತವಾಗಿದೆ. ಇಂತಹ ಮಹಾಮಹಿಮೆಯುಳ್ಳ ಶ್ರೀರಾಮನ ಚರಿತ್ರವನ್ನು ಪಠನಮಾಡುವವರೂ ಶ್ರವಣ ಮಾಡುವವರೂ ಶ್ರೀರಾಮ ಪಟ್ಟಾಭಿಷೇಕ ಮಹೋತ್ಸವವನ್ನು ಪರಿಪಾಲಿಸುವವರೂ ಕೃತಾರ್ಥರಾಗುತ್ತಾರೆಂದು ಶ್ರೀರಾಮಾಯಣದಲ್ಲಿಯೇ ಫಲಶ್ರುತಿಯಿಂದ ವ್ಯಕ್ತವಾಗಿದೆಯಷ್ಟೆ. ಹೀಗೆ ಶ್ರೀರಾಮನು ಶ್ರೀ ಮಹಾವಿಷ್ಣುವಿನ ಅವತಾರ ಮೂರ್ತಿಯೆಂದು ಲೋಕಪ್ರಖ್ಯಾತಿಯು ಇದ್ದಾಗ್ಯೂ— ಶ್ರೀರಾಮನು "ಆತ್ಮಾನಂ ಮಾನುಷಂ ಮನ್ಯೇ"—ಎಂದು ತಾನೂ ಒಬ್ಬ ಸಾಮಾನ್ಯ ಮನುಷ್ಯನಂತೆ ನಟಿಸಿದುದಕ್ಕೆ ತಾತ್ಪರ್ಯವೇನೆಂದು ಪರಿಶೀಲಿಸಿದರೆ, "ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ"—ಎಂಬ ತನ್ನ ಪರದುಃಖ ದುಃಖಿತ್ವರೂಪವಾದ ದಯಾಗುಣದ ಪಾರಮ್ಯವೇ ಪರಾತ್ಪರನಾದ ಶ್ರೀರಾಮನನ್ನೂ "ಆತ್ಮಾನಂ ಮಾನುಷಂ ಮನ್ಯೇ" ಎಂದು ಹೇಳುವಂತೆ ಮಾಡಿತೆಂದು ಅಂಗೀಕರಿಸಬೇಕಾಗಿದೆ. "ದೇವ್ಯಾ ಕಾರುಣ್ಯರೂಪಯಾ"—ಎಂಬಂತೆ ಕರುಣಾಮೂರ್ತಿಯಾದ ಸೀತಾದೇವಿಯು ಅಶೋಕವನದಲ್ಲಿ ಸೆರೆಯಲ್ಲಿದ್ದುದೂ ಕೂಡ ಸಕಲಲೋಕಜನನಿಯಾದ ತನ್ನ ವಾತ್ಸಲ್ಯಾತಿಶಯದಿಂದ ಸಂಸಾರಿಚೇತನರ ಬಂಧನಿವೃತ್ತಿಗಾಗಿಯೇ ಎಂದು ನಿರ್ಣೀತವಾಗಿದೆ. ಇಂತಹ ಶ್ರೀರಾಮಾವತಾರದ

ಮಹಿಮೆಯಲ್ಲಿ ಕಾರುಣ್ಯದ ಪಾರಮ್ಯವೇ ವಿಶೇಷವಾಗಿ ಪ್ರಕಾಶಿಸುತ್ತದೆ. ಶ್ರೀರಾಮನು ತನ್ನ ಪರತ್ವವನ್ನು ಚೆನ್ನಾಗಿ ಈ ಲೋಕದಲ್ಲಿ ಪ್ರಕಾಶಪಡಿಸುವುದಕ್ಕಾಗಿ ಅವತರಿಸಿದವನಲ್ಲ—ಆದುದರಿಂದಲೇ "ಆತ್ಮಾನಂ ಮಾನುಷಂ ಮನ್ಯೇ' ಎಂದು ತನ್ನ ಸೌಶೀಲ್ಯಾತಿಶಯವನ್ನು ವ್ಯಕ್ತಪಡಿಸಿದನು. ಇದಕ್ಕೆ ಸಾಕ್ಷಾತ್ ಪ್ರತಿಭಟವಾಗಿ "ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ"—ಎಂದು ಭಗವಂತನು ತನ್ನ ಪರಾತ್ಪರತ್ವವನ್ನು ಉದ್ಘೋಷಿಸಿದುದು ಶ್ರೀಕೃಷ್ಣಾವತಾರದಲ್ಲಿಯೇ ಎಂದು ಸುವ್ಯಕ್ತವಾಗಿ ಪ್ರಕಾಶಿಸುತ್ತದೆ. ಮತ್ತು ಶ್ರೀರಾಮಾವತಾರದಲ್ಲಿ ವಸಿಷ್ಠ-ವಿಶ್ವಾಮಿತ್ರಾದಿ ಮಹರ್ಷಿಗಳಿಗೆ ಶ್ರೀರಾಮನು ಶಿಷ್ಯನಾಗಿ ನಿಂತು ಉಪದೇಶಗಳಂ ಪಡೆದುದಾಗಿಯೇ ಪ್ರಾಯೇಣ ಪ್ರಖ್ಯಾತವಾಗಿದೆಯೇ ಹೊರತು ಶ್ರೀರಾಮನು ತನ್ನ ಆಚಾರ್ಯತ್ವವನ್ನ ಚೆನ್ನಾಗಿ ಪ್ರಕಾಶಪಡಿಸಿದನೆಂದು ಹೇಳಲು ಪ್ರಬಲವಾದ ಪ್ರಮಾಣವು ಶ್ರೀ ರಾಮಾಯಣದಲ್ಲಿ ಇಲ್ಲ. "ವೈದೇಹೀಸಹಿತಂ ಸುರದ್ರುಮತಲೇ"—ಇತ್ಯಾದಿ ಧ್ಯಾನಶ್ಲೋಕದಲ್ಲಿ ಮಾತ್ರ—"ತತ್ತ್ವಂ ಮುನಿಭ್ಯಃ ಪರಂ ವ್ಯಾಖ್ಯಾನ್ತಂ" ಎಂಬ ಸ್ಥಲದಲ್ಲಿ ಋಷಿಗಳಿಗೆ ಪರತತ್ತ್ವೋಪದೇಶವನ್ನು ಮಾಡುತ್ತ ಶ್ರೀರಾಮನೇ (ಆಂಜನೇಯನು ಪಠನಮಾಡುವ ಸಮಯದಲ್ಲಿ) ಆಚಾರ್ಯರೂಪಿಯಾಗಿ ಪ್ರಕಾಶಿಸಿದುದು ಸ್ವಲ್ಪಮಟ್ಟಿಗೆ ಸೂಚಿತವಾಗಿದೆ. ಶ್ರೀ ಕೃಷ್ಣಾವತಾರದ ಮಹಿಮೆಯನ್ನು ನೋಡಿದರೆ, ಸಕಲಲೋಕ ವಿಖ್ಯಾತನಾದ ಗೀತಾಚಾರ್ಯನಾಗಿ ನಿಂತು ತನ್ನ ಪರಾತ್ಪರತ್ವದೊಡನೆ ಕೂಡಿದ ಪ್ರಥಮಾಚಾರ್ಯತ್ವವನ್ನೇ ಪ್ರಕಾಶಪಡಿಸಿ ಶ್ರೀ ಕೃಷ್ಣನು ಗುರುಪರಂಪರೆಗೆಲ್ಲಾ ಶಿಖರವಾಗಿ "ಲಕ್ಷ್ಮೀನಾಥ ಸಮಾರಂಭಾಂ ................ವಂದೇ ಗುರುಪರಂಪರಾಮ್ ॥" ಎಂಬಂತೆ ಸರ್ವಮತಗಳ ಆಚಾರ್ಯರಿಗೂ ಸಂಸೇವ್ಯನಾಗಿರುತ್ತಾನೆಂದು ವ್ಯಕ್ತವಾಗುತ್ತದೆ. ಇಂತಹ ಗೀತಾಚಾರ್ಯತ್ವವು ಮಿಕ್ಕ ಯಾವ ಅವತಾರಗಳಲ್ಲೂ ವ್ಯಕ್ತ

ವಾಗಿಲ್ಲವಷ್ಟೆ. ಆದಾಗ್ಯೂ ಕೃಷ್ಣಾವತಾರದಲ್ಲಿ ನವನೀತ ಚಾರ್ಯ, ಗೋಪೀವಿಹಾದಿಗಳು ಸಾಮನ್ಯ ಲೋಕ ಧರ್ಮಗಳಿಗೆ ವಿರುದ್ಧ ವಾಗಿಯು ಕಾಣುತ್ತವೆ. ಕೃತ್ಯವೇ ವಿಶೇಷವಾಗಿ ಪ್ರಕಾಶಿಸುತ್ತಿರು ವುದರಿಂದ, ಧರ್ಮಾಚಾರ್ಯ ಪದವಿಯಲ್ಲೇ ಬುದ್ಧನು ನಿಂತು ಅಹಿಂ ಸಾದಿ ರೂಪವಾದ ಧರ್ಮಗಳನ್ನು ಉಪದೇಶಿಸಿದನೆಂದು ಅಂಗೀಕರಿಸ ಬಹುದು. ಆದರೂ ಬುದ್ಧಾವತಾರವು ವೇದಬಾಹ್ಯವಾದ ಪಾಷಣ್ಡ ಮತದ ಪ್ರಚಾರಕ್ಕಾಗಿಯೇ ಅಸುರ ಮೋಹನಾರ್ಥವೆಂದು ವೇದಾಂತಿ ಗಳು ನಿರ್ಣಯಿಸಿ ಬೌದ್ಧ ಮತವನ್ನು ಖಂಡಿಸಿ ಇರುವುದರಿಂದ ಆಸ್ತಿಕರಿಗೆ ಬುದ್ಧಾವತಾರವು ಪೂಜ್ಯವಾಗಲಿಲ್ಲವೆಂದು ಹೇಳಬೇಕಾ ಗಿದೆ. ಆದುದರಿಂದಲೇ ಈಗ ಶ್ರೀ ಕಲ್ಕಿ ನಾರಸಿಂಹಾವತಾರವು ಅಂತಹ ದೋಷಗಳನ್ನೆಲ್ಲಾ ಪರಿಹರಿಸಿ ಸತ್ಸಂಪ್ರದಾಯವನ್ನೇ ಸ್ಥಾಪಿ ಸಲು ಈ ಲೋಕದಲ್ಲಿ ಪ್ರಕಾಶಿಸುತ್ತಿದೆಯೆಂದು ಎಲ್ಲರೂ ಅಂಗೀಕ ರಿಸಬೇಕಾಗಿದೆ. ಶ್ರೀ ಕೃಷ್ಣಾವತಾರದಲ್ಲಿ ಆಚಾರ್ಯತ್ವವು ಚೆನ್ನಾಗಿ ಪ್ರಕಾಶಿಸಿದಾಗ್ಯೂ ಉಭಯವೇದಾನ್ತ ಪ್ರಭಾವವು ಆ ಕಾಲದಲ್ಲಿ ಪ್ರಕಾಶಿಸಲಿಲ್ಲ. ಆದುದರಿಂದ ದಿವ್ಯಸೂರಿಗಳ ಅವತಾರ ಕಾಲಾ ನನ್ತರ ಈ ಶ್ರೀಕಲ್ಕ್ಯವತಾರವು ಈ ಲೋಕದಲ್ಲಿ ಪ್ರಕಾಶಿಸಿ ಇರುವುದ ರಿಂದ ಶ್ರೀ ಕೃಷ್ಣಾವತಾರಕ್ಕಿಂತ ಈ ಶ್ರೀ ಕಲ್ಕಿ ನಾರಸಿಂಹಾವ ತಾರವೇ ಉತ್ಕೃಷ್ಟತಮವಾದುದೆಂದು ಉದ್ಘೋಷಿಸಬೇಕಾಗಿದೆ.



ಶ್ರೀ :

೯ನೆಯ ಪ್ರಕರಣ

## ಶ್ರೀರಾಮಾವತಾರ—ಕೃಷ್ಣಾವತಾರಗಳಿಗೆ ತಾರತಮ್ಯ

ಶ್ರೀ ಮಹಾವಿಷ್ಣುವಿನ ಅವತಾರಗಳು ಅನೇಕವಾಗಿ ಆಯಾ ಕಾಲಾನುಗುಣವಾಗಿ ಪ್ರಕಾಶಿಸುತ್ತವೆ. ದೇಶಕಾಲದಶಾದಿಗಳಿಗೆ ಅನುಸಾರವಾಗಿ ದಂಡನೀಯರಾದ ದುರಾತ್ಮರಿಗೆ ತಕ್ಕಂತೆ ಭಗವನ್ತನಿಗೆ ಗುಣಭೇದಗಳೂ ಮೂರ್ತಿಭೇದಗಳೂ ಅವತಾರಗಳಲ್ಲಿ ಕಾಣುತ್ತಲೇ ಇವೆ. ಅವನ ಅವತಾರ ಚರಿತ್ರಗಳಲ್ಲೂ ಇಂತಹ ಭೇದಗಳು ಇದ್ದೇ ಇವೆ. ಈಗ ಶ್ರೀರಾಮಾವತಾರಕ್ಕೂ ಶ್ರೀ ಕೃಷ್ಣಾವತಾರಕ್ಕೂ ಹೋಲಿಸಿನೋಡಿದರೆ ಪರಸ್ಪರತಾರತಮ್ಯವು ಎಷ್ಟೋ ಪ್ರಬಲವಾಗಿಯೇ ಕಾಣುತ್ತವೆ. ಕೆಲವು ಅಂಶಗಳನ್ನು ಇಲ್ಲಿ ಉದಾಹರಿಸಿ ತೋರಿಸುವೆವು.

೧. **ಶ್ರೀರಾಮ**—ಸಾಮಾನ್ಯ ಧರ್ಮ (ಮಾನುಷಾದಿ ಧರ್ಮ)
**ಶ್ರೀ ಕೃಷ್ಣ**—ವಿಶೇಷ ಧರ್ಮ (ಪರಾತ್ಪರ-ಅತಿಮಾನುಷ ಧರ್ಮ)

೨. **ಶ್ರೀರಾಮ**—ಸತ್ಯಪ್ರತಿಜ್ಞತ್ವ
**ಶ್ರೀ ಕೃಷ್ಣ**—ಸಮಯೋಚಿತವಾದ ತಂತ್ರ (ದುರಾತ್ಮರನ್ನು ವಂಚಿಸೋಣ)

೩. **ಶ್ರೀರಾಮ**—ಏಕಪತ್ನೀವ್ರತ
**ಶ್ರೀ ಕೃಷ್ಣ**—ಷೋಡಶಸ್ತ್ರೀಸಹಸ್ರೀಶತ್ವಾದಿ (ಗೋಪೀವಿಟತ್ವಾದಿ)

೪. ಶ್ರೀರಾಮ--ಕ್ಷತ್ರಿಯ ಧರ್ಮ

ಶ್ರೀ ಕೃಷ್ಣ—ಪಶುಪಾಲನ, ದೌತ್ಯ, ಸಾರಥ್ಯಾದಿಕೃತ್ಯ

೫. ಶ್ರೀರಾಮ—ದ್ವಿಭುಜ (ಕೋದಂಡಪಾಣಿ)

ಶ್ರೀಕೃಷ್ಣ—ಚತುರ್ಭುಜ (ಶಂಖಚಕ್ರಧಾರಿ)

೬. ಶ್ರೀರಾಮ—ಧರ್ಮಪರಿಪಾಲನ ಬದ್ಧದೀಕ್ಷತ್ವ

ಶ್ರೀಕೃಷ್ಣ—ಸರ್ವಧರ್ಮಪರಿತ್ಯಾಗೋಪದೇಶಕತ್ವ (ಸಾಕ್ಷಾತ್ಸನಾತನ ಧರ್ಮಮೂರ್ತಿತ್ವ)

೭. ಶ್ರೀರಾಮ--ಶೋಕರಸಭೂಯಿಷ್ಠತ್ವ-(ಕರುಣರಸ)

ಶ್ರೀಕೃಷ್ಣ—ಪರಮಾನಂದಸ್ವರೂಪತ್ವ (ಶೃಂಗಾರರಸ)

೮. ಶ್ರೀರಾಮ—(ವಸಿಷ್ಠ ವಿಶ್ವಾಮಿತ್ರಾದಿಗಳಿಗೆ) ಶಿಷ್ಯತ್ವ

ಶ್ರೀಕೃಷ್ಣ—ಗೀತಾಚಾರ್ಯತ್ವ (ಪ್ರಥಮಾಚಾರ್ಯತ್ವ)

ಈ ಪ್ರಕಾರ ಅನೇಕ ವಿಧವಾದ ತಾರತಮ್ಯವು ಅವತಾರಗಳಿಗೆ ಪರಸ್ಪರ ಗುಣಭೇದಾದಿಗಳಿಂದ ವ್ಯಕ್ತವಾಗುವುದು. ಶ್ರೀಭಗವಂತನು ಒಬ್ಬನೇ ಆದರೂ ಕಾಲ-ದೇಶ-ದಶಾ-ಪಾತ್ರಾದಿಗಳಿಗೆ ಅನುಗುಣವಾಗಿ ತನ್ನ ಮೂರ್ತಿ ಭೇದ-ಗುಣಭೇದಾದಿಗಳನ್ನು ಪ್ರಕಾಶಪಡಿಸಿ ತತ್ತದವತಾರ ಕೃತ್ಯಗಳನ್ನು ನಿರ್ವಹಿಸುವನು—ಎಂಬುದು ಅವತಾರ ರಹಸ್ಯದಲ್ಲಿ ಸೇರಿದ ಅಂಶವಾಗಿದೆ. ಶ್ರೀಮನ್ನಾರಾಯಣ ರೂಪಿಯಾದ ಭಗವಂತನು ದೋಷಗನ್ಧರಹಿತನಾದುದರಿಂದ ಅವತಾರಗಳಲ್ಲಿ ದೋಷಗಳಂತೆ ತೋರುವ ಕೃತ್ಯಗಳು ದೋಷಗಳೇ ಅಲ್ಲ. ಅವುಗಳು ಪರಮಾತ್ಮನ ಅತಿಮಾನುಷ ಚೇಷ್ಟಿತಗಳು. ರಾಮಾವತಾರದಲ್ಲಿ ತಾಟಕಾವಧ-ವಾಲಿವಧಾದಿಗಳಲ್ಲಿ ದೋಷವೇ ಇಲ್ಲ. ಕೃಷ್ಣಾವತಾರದಲ್ಲಿ ನವನೀತಾದಿಚೌರ್ಯ ಗೋಪಿವಿಹಾರಾದಿಗಳಲ್ಲಿಯೂ ದೋಷಗನ್ಧವೂ ಇಲ್ಲ. (ನನ್ನ ಶ್ರೀಕೃಷ್ಣಗೋಪೀ ಸಂವಾದವನ್ನು ಓದಿನೋಡಿರಿ.) ಮೋಹಿನ್ಯವ

ತಾರದಲ್ಲಿ ಅಸುರವಂಚನ, ವಾಮನಾವತಾರದಲ್ಲಿ ಬಲಿವಂಚನ— ಇತ್ಯಾದಿಗಳೂ ದೋಷಗಳೇ ಅಲ್ಲ. (ವಂಚಕ ವಂಚನವು ದೋಷ ವೇ ಅಲ್ಲ,) ಈ ಅತಿಮಾನುಷ ವ್ಯಾಪಾರಗಳೆಲ್ಲಾ ಅವತಾರ ರಹ ಸ್ಯಗಳಾದುದರಿಂದ ಶ್ರೀಪರಮಾತ್ಮನಲ್ಲಿ ದೋಷಾರೋಪಗಳನ್ನು ಮಾಡುವ ದುರ್ಜನರು ಶಿಶುಪಾಲಾದಿಗಳಂತೆ ನಷ್ಟರಾಗುವರು. ಭಕ್ತೋತ್ತಮರು ಪ್ರಹ್ಲಾದಾದಿಗಳಂತೆ ರಕ್ಷಿತರಾಗುವರು.

---

ಶ್ರೀಃ

## ೧೦ನೆಯ ಪ್ರಕರಣ

### ಬುದ್ಧಾವತಾರದ ವೈಭವ

ಶ್ರೀ ಭಗವಂತನ ಅವತಾರಗಳನ್ನು ನಿಂದಿಸಕೂಡದು. ಬುದ್ಧಾವತಾರವನ್ನೂ ಯಾರೂ ನಿಂದಿಸಕೂಡದು. ಶ್ರೀರಾ ಮನೂ ಶ್ರೀಕೃಷ್ಣನೂ ಕ್ಷತ್ರಿಯ ವಂಶದಲ್ಲಿ ಅವತರಿಸಿದ್ದರೂ ಇತರ ವರ್ಣಗಳ ಧರ್ಮಗಳನ್ನೂ ಕಥಂಚಿತ್ ಸ್ವಲ್ಪಮಟ್ಟಿಗೆ ಆಚ ರಿಸಿದರೆಂದು ಅವರ ಚರಿತ್ರಗಳಿಂದ ವ್ಯಕ್ತವಾಗಿದೆ. ಶ್ರೀರಾಮನು ಚೀರಾಂಬರಧಾರಿಯಾಗಿ ತಾಪಸವೃತ್ತಿಯನ್ನು ಕೆಲವು ವರ್ಷಗಳ ಕಾಲ ಅವಲಂಬಿಸಿ ಇದ್ದನು. ಶ್ರೀಕೃಷ್ಣನು ಗೋಕುಲದಲ್ಲಿ ಬೆಳೆ ದು ಗೋಪಾಲಕನಾಗಿಯೇ ಕೆಲವು ವರ್ಷಗಳಕಾಲ ಇದ್ದನೆಂದು ಪ್ರಖ್ಯಾತವಾಗಿದೆಯಷ್ಟೆ. ಪಾಂಡವ ದೂತನಾಗಿಯೂ ಪಾರ್ಥ

ಸಾರಥಿಯಾಗಿಯೂ ನಿಂತು ಕ್ಷತ್ರಿಯ ಧರ್ಮವನ್ನು ಆಚರಿಸಿದ ಶ್ರೀಕೃಷ್ಣನಿಗೆ ಗೋಪಾಲ ಬಾಲನೆಂಬ ಬಿರುದೇ ಅತ್ಯಂತ ಪ್ರಿಯವಾಗಿತ್ತೆಂಬುದು ಸ್ಪಷ್ಟವಾಗಿದೆ. ಹೀಗೆಯೇ ಬುದ್ಧಾವತಾರದಲ್ಲಿ—ಬುದ್ಧನು ಕ್ಷತ್ರಿಯ ಕುಲದಲ್ಲಿ ಹುಟ್ಟಿದರೂ ರಾಜ್ಯಭಾರದಲ್ಲಿ ಅನಾದರವಂ ಮಾಡಿ ಸಂಸಾರಸಾಗರ ಸಮುತ್ತರಣೋಪಾಯಗಳನ್ನೇ ಚಿಂತಿಸುತ್ತ ತಾಪಸವೃತ್ತಿಯಿಂದ ಸಕಲ ಲೋಕೋಜ್ಜೀವನಕ್ಕಾಗಿ ಅತ್ಯಂತೋಪಕಾರಕವಾದ ಧರ್ಮಗಳನ್ನೇ ಉಪದೇಶಿಸುತ್ತ ಅಹಿಂಸಾದಿ ಪರಮೋತ್ಕೃಷ್ಟ-ವೈದಿಕ ಧರ್ಮವನ್ನೇ ಅವಲಂಬಿಸಿ ಇದ್ದರೂ, ತತ್ಕಾಲದಲ್ಲಿ ಬ್ರಾಹ್ಮಣರಿಗೆ ಪ್ರಿಯವಾಗಿದ್ದ ಪಶುಯಜ್ಞಾದಿಗಳನ್ನು ಬುದ್ಧನು ಅಧರ್ಮ ಕೃತ್ಯಗಳೆಂದು ನಿಷೇಧಿಸಿದುದರಿಂದ, ಅವನು ವೇದಬಾಹ್ಯನಾದ ಪಾಷಂಡನೆಂದು ಬ್ರಾಹ್ಮಣ ವರ್ಣದವರು ಅವನ ಮತವನ್ನು ಖಂಡಿಸಿದರು. ಆದಾಗ್ಯೂ ಬೌದ್ಧಮತಕ್ಕೂ ಬ್ರಾಹ್ಮಣರ ವೈದಿಕ ಮತಕ್ಕೂ ಪರಸ್ಪರ ವೈಷಮ್ಯವು ಅಷ್ಟು ಪ್ರಬಲವಾಗಿರಲಿಲ್ಲ—ಬೌದ್ಧಮತದ ಪ್ರಚಾರವು ಭರತಖಂಡದಲ್ಲಿ ಕ್ಷೀಣವಾಗುವುದಕ್ಕೆ ರಾಜಕೀಯ ತಂತ್ರಗಳಲ್ಲಿ ಮಹಮ್ಮದೀಯರ ಪ್ರವೇಶದಿಂದ ಉಂಟಾದ ಹಾವಳಿಗಳೇ ಮುಖ್ಯಕಾರಣವಾಗಿರಬಹುದೆಂದು ಅನೇಕರು ನಿರ್ಣಯಿಸಿ ಇರುತ್ತಾರೆ. ಬೌದ್ಧಮತಾವಲಂಬಿಗಳಾದ ರಾಜರು ಬ್ರಾಹ್ಮಣರ ದೇವಾಲಯಗಳನ್ನೆಲ್ಲಾ ಜೀರ್ಣೋದ್ಧಾರಮಾಡಿ ಪೋಷಿಸುತ್ತಿದ್ದರೆಂದೂ ಬ್ರಾಹ್ಮಣರನ್ನೇ ತಮ್ಮ ಪುರೋಹಿತರನ್ನಾಗಿ ಏರ್ಪಡಿಸಿಕೊಂಡಿದ್ದರೆಂದೂ ತಿಳಿಯಬರುತ್ತದೆ. ಆದುದರಿಂದ ಬುದ್ಧಾವತಾರವು ಬ್ರಾಹ್ಮಣ ಮತಗಳಿಗೆ ಅಷ್ಟು ವಿರೋಧಿಯಾಗಿತ್ತೆಂದು ಯಾರೂ ಹೇಳಲಾಗುವುದಿಲ್ಲ. ಶ್ರೀಕೃಷ್ಣಾವತಾರವಾದಮೇಲೆ ಸುಮಾರು ೩೫೦೦ ವರ್ಷಗಳು ಕಳೆದ ಅನಂತರ ಬುದ್ಧಾವತಾರವು (ಈ ಕಲಿಯುಗದ ೫೦೦೦ ವರ್ಷಗಳ ಮಧ್ಯಕಾಲದಲ್ಲಿ) ಈ ಲೋಕ

ದಲ್ಲಿ ಪ್ರಕಾಶಿಸಿತೆಂದು ಹೇಳಬಹುದಾಗಿದೆ. ಕೃಷ್ಣನಿರ್ಯಾಣ ಕಾಲವೇ ಕಲಿಯುಗಾರಂಭ ಕಾಲವೆಂದು ಪುರಾಣಗಳಲ್ಲಿ ನಿರ್ಣೀತ ವಾಗಿದೆ. ಈಗ ಕಲಿಯುಗದ ೫೦೦೦ ವರ್ಷಗಳು ಕಳೆದುಹೋಗಿ ಇರುವುದರಿಂದ—"ಕಲೌ ಪಂಚಸಹಸ್ರಾನ್ತೇ ವಿಷ್ಣುಸ್ತ್ಯಕ್ಷ್ಯತಿ ಮೇದಿನೀಮ್" ಎಂಬ ವಚನದ ಸಾರ್ಥಕ್ಯಕ್ಕೆ ಇದು ತಕ್ಕ ಕಾಲ ವಾಗಿದೆ. ಈಗ ಬುದ್ಧಾವತಾರದ ಉಪದೇಶ ಮಾರ್ಗಗಳಿಗೂ ಮತ್ತು ವೇದಾಂತ ಮಾರ್ಗಗಳಿಗೂ ಇರುವ ಸಂಬಂಧಗಳನ್ನು ಪರಿಶೀಲಿಸಿದರೆ ಅನೇಕ ಪ್ರಕಾರಗಳಲ್ಲಿ ಸಂವಾದಗಳೂ ಕಾಣು ವುವು, ಭೇದಗಳೂ ಕಾಣುವುವು. ಸಂವಾದಗಳು ಇರುವ ಕಡೆಗ ಳಲ್ಲಿ ಆಕ್ಷೇಪಕ್ಕೆ ಅವಕಾಶವೇ ಇಲ್ಲದೆ ಇದ್ದುದರಿಂದ ಭೇದಗಳನ್ನೇ ತೋರಿಸಿ ವೇದಾಂತಿಗಳು ಬೌದ್ಧಮತವನ್ನು ಖಂಡಿಸಬೇಕಾ ಯಿತು. ಶಂಕರಾಚಾರ್ಯರು ಬೌದ್ಧಮತವನ್ನು ಖಂಡಿಸಲು ಉದ್ಯುಕ್ತರಾಗಿ ಅನೇಕ ಗ್ರಂಥಗಳನ್ನು ಬರೆಯಲು ಪ್ರಯತ್ನಪ ಟ್ಟಾಗ್ಯೂ ಬೌದ್ಧಮತದ ಮಾಯಾವಾದವು ಅವರಿಗೆ ಅತ್ಯಂತ ಮೋಹಕವಾಗಿದ್ದುದರಿಂದ ಅದನ್ನೇ ಅಂಗೀಕರಿಸಿ ತಮ್ಮ ಮತ ದಲ್ಲಿ ಪ್ರಕಾಶಪಡಿಸಿದರು. ಬೌದ್ಧರಲ್ಲಿ (೧) ಸೌತ್ರಾನ್ತಿಕ (೨) ವೈಭಾಷಿಕ (೩) ಯೋಗಾಚಾರ (೪) ಮಾಧ್ಯಮಿಕ—ಎಂದು ನಾಲ್ಕು ಭೇದಗಳಿವೆ. ಅವುಗಳಲ್ಲಿ ಯೋಗಾಚಾರ ಮತವೇ ಶಂಕ ರಾಚಾರ್ಯರಿಗೆ ಇಷ್ಟವಾಯಿತು. ಈ ಮತದಲ್ಲಿ-ಜ್ಞಾತಾ (ಜೀವನ) ಮಿಥ್ಯಾ, ಜ್ಞೇಯಂ (ಜಗತ್-ಪ್ರಕೃತಿ) ಮಿಥ್ಯಾ, ಜ್ಞಾನಂ ಮಾತ್ರಂ ಸತ್ಯಮ್—ಎಂದು ಪ್ರತಿಪಾದಿತವಾಗಿದೆ. ಶಂಕರಾ ಚಾರ್ಯರು ಚರಾಚರಪ್ರಪಂಚ ಮಿಥ್ಯಾತ್ವವನ್ನು ಅಂಗೀಕರಿಸಿ ಅಪ ರೋಕ್ಷಾನುಭೂತಿಯೆಂಬ ಅಖಂಡ ಚೈತನ್ಯವೇ ಪರಬ್ರಹ್ಮವೆಂದು ವರ್ಣಿಸಿ ಇರುತ್ತಾರಷ್ಟೆ. ಆದುದರಿಂದಲೇ ಯೋಗಾಚಾರಮತಾ ವಲಂಬಿಯಾದ ಶಂಕರಾಚಾರ್ಯರ ಮತವನ್ನು ಕೆಲವರು ಪ್ರ

ಜ್ಞನ್ನ ಬೌದ್ಧಮತವೆಂದು ಪ್ರಖ್ಯಾಪಿಸಿ ಖಂಡಿಸಿದರು. ಈ ಪ್ರಕಾರ ಬೌದ್ಧಮತವು ವೇದಾಂತಿಗಳಿಗೂ ಮೋಹಜನಕವಾಗಿಯೇ ಇತ್ತೆಂದು ಅನೇಕ ನಿದರ್ಶನಗಳಿಂದ ವ್ಯಕ್ತವಾಗುತ್ತದೆ. ಬೌದ್ಧಮತದಲ್ಲಿರುವ ನೀತಿತತ್ವಗಳೂ, ಅಹಿಂಸಾದಿ ಧರ್ಮಗಳೂ ಧ್ಯಾನಮಾರ್ಗಗಳೂ ಲೋಕೋಪಕಾರ ಕೃತ್ಯೋಪದೇಶಗಳೂ ಸಕಲಜನ ಚಿತ್ತಾಕರ್ಷಕವಾಗಿದ್ದುದರಿಂದ ಬಾಹ್ಯ ದೇಶಗಳಲ್ಲಿಯೂ ಬೌದ್ಧಮತದ ಪ್ರಚಾರಕ್ಕೆ ಅವಕಾಶವುಂಟಾಯಿತು. ಅಶೋಕರಾಜನ ಶಾಸನಗಳಿಂದ ಗ್ರೀಸ್-ಇಟಲಿ ಮುಂತಾದ ಪ್ರಾಂತ್ಯಗಳಲ್ಲೂ ಕೂಡ ಬೌದ್ಧಮತದ ಪ್ರಾಶಸ್ತ್ಯವು ಪ್ರಕಾಶಿಸುತ್ತಿತ್ತೆಂದು ವ್ಯಕ್ತವಾಗುತ್ತದೆ. ಇಷ್ಟು ಪ್ರಬಲವಾಗಿದ್ದ ಬೌದ್ಧಮತವು ಈ ಭರತಖಂಡದಲ್ಲಿ ಅನಾದರಣೀಯವಾಗಲು ಕಾರಣವೇನೆಂದರೆ—ವೇದಾಂತಿಗಳಾದ ಬ್ರಾಹ್ಮಣಾದಿ ಮತಸ್ಥರು ಬೌದ್ಧಮತವನ್ನು ವೇದಬಾಹ್ಯವಾದ ಪಾಷಣ್ಡಮತವೆಂದು ನಿರಾಕರಿಸಿದುದರಿಂದಲೇ ಈ ದೇಶದಲ್ಲಿ ಅದು ಅನಾದರಣೀಯವಾಯಿತೆಂದು ಕೆಲವರು ಹೇಳುತ್ತಾರೆ. ಯದ್ಯಪಿ-ಜಿನ-ಬುದ್ಧ-ಎಂಬೀ ಅವತಾರಗಳೂ ಈ ಭರತಖಂಡದಲ್ಲೇ ಪ್ರಕಾಶಿಸಿದುದರಿಂದ ಈ ದೇಶಕ್ಕೇ ಜೈನ-ಬೌದ್ಧ ಮತಗಳು ಸೇರಿದ್ದರೂ ಕ್ರಮೇಣ ಬಾಹ್ಯದೇಶಗಳಿಗೂ ಹರಡಿಕೊಂಡವೆಂದು ಊಹಿಸಬೇಕಾಗಿದೆ. ಜೈನ-ಬೌದ್ಧಮತಗಳಲ್ಲಿ ಜಗತ್ಕಾರಣಭೂತನಾದ ಭಗವಂತನು ಒಬ್ಬನೇ ಪರಾತ್ಪರನಾದ ಸರ್ವಲೋಕೇಶ್ವರನು—ಎಂದು ವ್ಯಕ್ತವಾಗಿ ಪ್ರಕಾಶಿತವಾಗಿಲ್ಲವೆಂಬುದೇ ವೇದಾಂತಿಗಳು ಅನಾದರಿಸುವುದಕ್ಕೆ ಮುಖ್ಯ ಕಾರಣವಾಗಿರುತ್ತದೆ. ಆದರೂ ಬುದ್ಧನ ಸಾಕ್ಷಾದ್ವಚನಗಳ ತಾತ್ಪರ್ಯವು ಅನೇಕ ಕಡೆಗಳಲ್ಲಿ ಗೀತಾಶಾಸ್ತ್ರದಲ್ಲಿರುವ ಭಗವಂತನ

ದಿವ್ಯಸೂಕ್ತಿಗಳ ತಾತ್ಪರ್ಯವೇ ಆಗಿದೆಯೆಂದು ಈ ಕೆಲವು ಸೂಕ್ತಿಗಳಿಂದ ವ್ಯಕ್ತವಾಗುತ್ತದೆ.

"ನಾನು ಈಗ ಸರ್ವಲೋಕ ಜಯವಂ ಪಡೆದು, ಸರ್ವಜ್ಞನಾಗಿಯೂ, ನಿರ್ದೋಷನಾಗಿಯೂ, ವೈರಾಗ್ಯನಿಧಿಯಾಗಿಯೂ ಇದೇನೆ. ದಿವ್ಯಜ್ಞಾನವೆಲ್ಲಾ ನನ್ನದೇ ಆಗಿದೆ. ನನಗೆ ಒಬ್ಬ ಗುರುವೂ ಇಲ್ಲ. ನನಗೆ ಸಮಾನರು ಎಲ್ಲಿಯೂ ಯಾರೂ ಇಲ್ಲ. ದೇವಲೋಕಗಳಲ್ಲೂ ಮನುಷ್ಯಲೋಕಗಳಲ್ಲೂ ಯಾರೂ ನನಗೆ ಪ್ರತಿಭಟರು ಇಲ್ಲ. ಸರ್ವಲೋಕ ಪಾವನನಾದ ನಾನೇ ಸರ್ವಜ್ಞನಾದ ಬುದ್ಧನೆಂಬ ಜಗದಾಚಾರ್ಯನಾಗಿ ಅಪ್ರತಿಮನಾಗಿದ್ದೇನೆ. ಸರ್ವ ಕಾಮುಗಳನ್ನೂ ಜಯಿಸಿ ನಿರ್ವಾಣ ಸುಖವಂ ಪಡೆದು ಇರುತ್ತೇನೆ. ನನ್ನ ಮತವನ್ನು ಕಾಶಿಯಲ್ಲಿ ಉದ್ಘೋಷಿಸಿ ಈ ಲೋಕದ ಮೌಢ್ಯವನ್ನು ನಿವಾರಣ ಮಾಡಿ ಅಮೃತತ್ವವನ್ನು ಪ್ರಖ್ಯಾಪಿಸುವೆನು." (ಈ ವಚನವು ಬೋಧಿ–ಮತ್ತು-ಗಯಾ–ಕ್ಷೇತ್ರಗಳ ಮಧ್ಯೆ ಉಪಕನೊಡನೆ ಸಂವಾದದಲ್ಲಿದೆ.)

[ಮತ್ತು ಬುದ್ಧನು ಹಠಯೋಗದಿಂದ ಯಾವ ಪ್ರಯೋಜನವೂ ಇಲ್ಲವೆಂದು ನಿರ್ಣಯಿಸಿ ಕಾಯಕ್ಲೇಶಕರವಾದ ವ್ಯಾಪಾರಗಳನ್ನೆಲ್ಲಾ ಬಿಟ್ಟು ಮಿತಾಹಾರಿಯಾಗಿ ಧ್ಯಾನಮಾರ್ಗವನ್ನೇ ಅವಲಂಬಿಸಿದನೆಂದು ಪ್ರಮಾಣ ವಚನಗಳಿವೆ.]

(*Vide*—Life & Teachings of Buddha by the Aragarika Dharmapala—G. A. Natesan & Co., pp. 42–44.)

ಈ ವಚನಗಳಿಂದ ಬುದ್ಧನೂ ಶ್ರೀಕೃಷ್ಣನಂತೆಯೇ ತಾನೇ ಪರಾತ್ಪರನೆಂದು ತಿಳಿದುಕೊಂಡಿದ್ದನೆಂದೂ ವ್ಯಕ್ತವಾಗುತ್ತದೆ

ಯಷ್ಟೆ. "ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ"—ಎಂಬ ಗೀತಾವಚನದ ಅರ್ಥವೇ ಇಲ್ಲಿಯೂ ಪ್ರತಿಪಾದಿತವಾಗಿರುವುದರಿಂದ ಬುದ್ಧನೂ ಭಗವದವತಾರವೆಂದು ಅಂಗೀಕರಿಸಲು ಯಾವ ಅಡ್ಡಿಯೂ ಇಲ್ಲವೆಂದು ತೋರುತ್ತದೆ. ಶ್ರೀಭಾಗವತಾದಿ ಗ್ರಂಥಗಳಲ್ಲಿಯೂ ಬುದ್ಧಾವತಾರವು—"ಕೀಕಟೇಷು ಭವಿಷ್ಯತಿ"ಎಂದು ಭವಿಷ್ಯದವತಾರವಾಗಿ ಸೂಚಿತವಾಗಿಯೇ ಇದೆಯಷ್ಟೆ. ಆದುದರಿಂದ ಬುದ್ಧಾವತಾರವು ದಶಾವತಾರಗಳಲ್ಲಿ ಸೇರಿದುದೆಂದು ಪರಿಗೃಹೀತವಾಗಿಯೇ ಇದೆ. ಕೆಲವರು ಬುದ್ಧಾವತಾರವನ್ನು ಬಿಟ್ಟು ಬಲರಾಮನನ್ನು ಸೇರಿಸಿಕೊಂಡು ದಶಾವತಾರಗಳ ಪರಿಗಣನವಂ ಮಾಡುತ್ತಾರೆ. ಇದು ಸಂಪ್ರದಾಯಕ್ಕೆ ಅಷ್ಟು ಸಂಗತವಾಗಿ ಸೇರುವುದಿಲ್ಲ.

"ಮತ್ಸ್ಯಕೂರ್ಮವರಾಹಾಶ್ಚ
ನಾರಸಿಂಹಶ್ಚ ವಾಮನಃ।
ರಾಮೋರಾಮಶ್ಚ ಕೃಷ್ಣಶ್ಚ
ಬುದ್ಧಃ ಕಲ್ಕಿಸ್ತಥೈವ ಚ॥"

—ಎಂಬ ಪಾಠವೇ ಸಂಗತವಾಗಿ ತೋರುತ್ತದೆ. ಬುದ್ಧನು ವೇದಬಾಹ್ಯನಾದ ಪಾಷಂಡನೆಂದು ಭಾವಿಸಿ ಬುದ್ಧನನ್ನು ಬಿಟ್ಟು "ರಾಮೋ ರಾಮಶ್ಚ ರಾಮಶ್ಚ ಕೃಷ್ಣಃ ಕಲ್ಕಿಸ್ತಥೈವ ಚ॥" ಎಂದು ಪಾಠವನ್ನು ಬದಲಾಯಿಸಿ ಪರಶುರಾಮ-ಶ್ರೀರಾಮ-ಬಲರಾಮ-ಕೃಷ್ಣ-ಕಲ್ಕಿ-ಎಂದು ದಶಾವತಾರಗಳಲ್ಲಿ ಕ್ರಮವನ್ನು ಕೆಲವರು ಏರ್ಪಡಿಸಿದರೆಂದು ನಾವು ಊಹಿಸಬಹುದಾಗಿದೆ. "ಅನನ್ತಃ ಪ್ರಥಮಂ ರೂಪಂ ಲಕ್ಷ್ಮಣಶ್ಚ ತತಃಪರಮ್। ಬಲಭದ್ರಸ್ತೃತೀಯಸ್ತು ಕಲೌಕಶ್ಚಿದ್ಭವಿಷ್ಯತಿ"—ಎಂಬ ಪ್ರಮಾಣವನ್ನೂ ಪರಿಶೀಲಿಸಿದರೆ ಆದಿಶೇಷನ ಅವತಾರಗಳು ನಾಲ್ಕು ಯುಗಗಳಲ್ಲೂ ಕ್ರಮವಾಗಿ (೧) ಅನನ್ತ (೨) ಲಕ್ಷ್ಮಣ (೩) ಬಲರಾಮ

(೪) ಶ್ರೀರಾಮಾನುಜಾಚಾರ್ಯರೆಂಬ ಭವಿಷ್ಯದವತಾರ—ಎಂಬೀ ಸಂಪ್ರದಾಯಕ್ರಮನೇ ಈ ಶ್ಲೋಕದಿಂದ ವ್ಯಕ್ತವಾಗುತ್ತದೆ ಯಷ್ಟೆ. ಆದುದರಿಂದ ಬಲರಾಮನ ಅವತಾರವನ್ನು ಭಗವಂತನ ದಶಾವತಾರಗಳಲ್ಲಿ ಸೇರಿಸೋಣವು ಸಂಪ್ರದಾಯಕ್ಕೆ ಅನುಕೂಲ ವಾಗಿಯೂ ಸಂಗತವಾಗಿಯೂ ತೋರುವುದಿಲ್ಲವೆಂತಲೂ, ಬುದ್ಧಾ ವತಾರವನ್ನೂ ಪರಶುರಾಮಾವತಾರವನ್ನು ಆವೇಶಾವತಾರವೆಂದು ಅಂಗೀಕರಿಸಿದಂತೆಯೇ ದಶಾವತಾರಗಳಲ್ಲಿ ಸೇರಿದುದೆಂದು ಅಂಗೀ ಕರಿಸಬಹುದೆಂತಲೂ—ನಾವು ನಿರ್ಮತ್ಸರರಾಗಿ ಸಿದ್ಧಾಂತ ಮಾಡ ಬೇಕಾಗಿದೆ. ಇದೇ ಶ್ರೀ ಕಲ್ಕಿ ನಾರಸಿಂಹಾವತಾರವಾದ ನನ್ನ ಉದಾರವಾದ ಸಿದ್ಧಾಂತವೆಂದು ಸಹೃದಯರಾದವರೆಲ್ಲರೂ ಅಂಗೀ ಕರಿಸುವರೆಂದು ನಂಬಿ ಇರುತ್ತೇನೆ. ಬೌದ್ಧಮತದ ಸಂಪ್ರದಾ ಯವು ಪಶುಯಜ್ಞಾದಿ ಘೋರಕರ್ಮ ನಿವಾರಕವಾದುದರಿಂದ ನಮಗೆ ಈಗ ಅತ್ಯಂತೋಪಕಾರಕವೆಂದೇ ನಾವು ನಿರ್ಣಯಿಸಬಹು ದಾಗಿದೆ—ಎಂಬುದೇ ನನ್ನ ಅಭಿಪ್ರಾಯವು. (ಗೀತೆಯಲ್ಲೂ ಕೂಡ ಪೂರ್ವದಲ್ಲೇ ನಾನು ಪಶುಯಜ್ಞಾದಿ ನಿಷೇಧಕವಾದ ನನ್ನ ಅಭಿ ಪ್ರಾಯವನ್ನು—"ತ್ರೈಗುಣ್ಯ ವಿಷಯಾ ವೇದಾಃ" "ಶ್ರೇಯಾ೯ ದ್ರವ್ಯಮಯಾದ್ಯಜ್ಞಾದ್ ಜ್ಞಾನಯಜ್ಞಃ ಪರನ್ತಪ" ಇತ್ಯಾದಿ ವಚನಗಳಲ್ಲಿ ಸೂಚಿಸಿಯೇ ಇರುತ್ತೇನಷ್ಟೆ. ಅನೇಕ ವಿಧವಾಗಿ ದೋಷಗಳಾಗಿ ತೋರುವ ನನ್ನ ಅವತಾರ ರಹಸ್ಯಗಳು ಅತ್ಯದ್ಭು ತವಾಗಿಯೂ ಗೋಪ್ಯವಾಗಿಯೂ ಇರುವುದರಿಂದ ಸಾಮಾನ್ಯ ರಿಗೆ ತಿಳಿಯಲಾರವು. ಪ್ರಾಜ್ಞರಿಗೆ ಸ್ವಲ್ಪಮಟ್ಟಿಗೆ ಸ್ಫುರಿಸುವುವು. ಆದುದರಿಂದ ಈಗ ಪಶುಯಜ್ಞಾದಿ ಕರ್ಮವು ನನಗೆ ಅನಭಿಮತ ವೆಂದು ಪ್ರಾಜ್ಞರಿಂದಲೇ ಸಿದ್ಧಾನ್ತಿತವಾಗಿದೆ.

ಶ್ರೀರಾಮಾವತಾರ-ಶ್ರೀಕೃಷ್ಣಾವತಾರಗಳು ಹೇಗೆ ನಿಂದನೀ ಯವಲ್ಲವೋ ಹಾಗೆಯೇ ಬುದ್ಧಾವತಾರವೂ ಕೂಡ ನಿಂದನೀಯ

ವಲ್ಲವೆಂದು ಪ್ರಾಜ್ಞರಾದ ಮಹಾತ್ಮರು ತಿಳಿದುಕೊಂಡು, ಶ್ರೀಪರಮಾತ್ಮನಲ್ಲಿ ದೋಷಾರೋಪಗಳಂ ಮಾಡದೆ ಗುಣಗ್ರಹಣ ತತ್ಪರರಾಗಿಯೇ ಇದ್ದುಕೊಂಡು, ಅವತಾರಗಳಲ್ಲಿ ಅವನಿಗೆ ಸಹಾಯಭೂತರಾಗಿ ಕೈಂಕರ್ಯಗಳಂ ಮಾಡುತ್ತ ಕೃತಾರ್ಥರಾಗುವರು. ಇಂತಹ ಮಹಾತ್ಮರೇ ಈಗ ಶ್ರೀಕಲ್ಕಿ ಸಿಂಹಾವತಾರದ ವಿಷಯದಲ್ಲೂ ವಿಶ್ವಾಸಶೀಲರಾಗಿ ಕೈಂಕರ್ಯನಿಷ್ಠರಾಗಿ ಕೃತಾರ್ಥರಾಗುತ್ತಿದಾರೆ. ಈ ಲೋಕದಲ್ಲಿ ಅವತಾರ ಮಾಡುವ ಶ್ರೀ ಪರಮಾತ್ಮನ ಕೈಂಕರ್ಯನಿಷ್ಠರಾದ ಭಕ್ತೋತ್ತಮರು ಮುಕ್ತರೆಂದೇ ಪರಿಗಣಿತರಾಗಿ ಧನ್ಯರಾಗುವರು. ಇಂತಹ ಭಕ್ತೋತ್ತಮರೇ— "ಅತ್ರಬ್ರಹ್ಮ ಸಮಶ್ನುತೇ"-ಎಂಬ ಶ್ರುತಿಗೆ ಅನುಗುಣವಾಗಿ-ಜೀವನ್ಮುಕ್ತರೆಂದೂ ಕರೆಯಲ್ಪಡುತ್ತಾರೆ. (ಶಠಾರಿ-ಕಲಿಜಿತ್ ಪ್ರಭೃತಿಗಳಾದ ದಿವ್ಯಸೂರಿಗಳು ಭಗವಂತನ ಪೂರ್ವಾವತಾರಗಳಲ್ಲಿ ಪ್ರಹ್ಲಾದ-ಹನುಮಾನ್-ಸುಗ್ರೀವ-ವಿಭೀಷಣ--ಶಬರೀ-ಗುಹ--ಸಂಪಾತಿ-ಜಟಾಯು-ಕುಬ್ಜಾ-ಮಾಲಾಕಾರ-ವಿದುರ--ಕುಚೇಲ- ಪಾಂಡವ-ಗೋಪೀಜನಾದಿಗಳಿಗೆ ಉಂಟಾದ ಉತ್ತಮಗತಿಯನ್ನು ಪರಿಶೀಲಿಸಿ ತಾವೂ ಇಲ್ಲಿಯೇ ಮುಕ್ತರಾಗಬೇಕೆಂದು ಗೋಪೀಜನರಂತೆ ನಾಯಿಕಾರೂಪದಿಂದ ಶ್ರೀ ಭಗವತ್ಸಂಶ್ಲೇಷವನ್ನೇ ಅಪೇಕ್ಷಿಸಿ ಮೋಕ್ಷಸಾಮ್ರಾಜ್ಯದ ಆನನ್ದವನ್ನು ಇಲ್ಲಿಯೇ ಪಡೆದರು) ಆದುದರಿಂದ ಎಲ್ಲರೂ ಅವತಾರಪುರುಷನಾದ ಶ್ರೀಭಗವಂತನಿಗೆ ಪ್ರಿಯತಮರಾಗಿ "ಪ್ರಿಯತಮ ಏವ ಹಿ ವರಣೀಯೋಭವತಿ"— ಎಂಬಂತೆ ಇಲ್ಲಿಯೇ ಅವನ ಕೈಂಕರ್ಯಕ್ಕೆ ಅರ್ಹರಾಗಿ ಕೃತಾರ್ಥರಾಗಬೇಕು.

---

## ೧೧ನೆಯ ಪ್ರಕರಣ

## ಶ್ರೀಕಲ್ಕಿ-ನಾರಸಿಂಹಾವತಾರದ ಮಾಹಾತ್ಮ್ಯ

ಪ್ರಕೃತಕಾಲದ ಶ್ರೀಕಲ್ಕಿ ನಾರಸಿಂಹಾವತಾರವು ಈ ಲೋಕ ದಲ್ಲಿ ಈಗ "ಯದಾ ಯದಾ ಹಿ ಧರ್ಮಸ್ಯ ಗ್ಲಾನಿಃ"—ಎಂಬ ಗೀತಾವಚನಕ್ಕೆ ಅನುಗುಣವಾಗಿ ಪ್ರಕಾಶಿಸುತ್ತಿದೆಯೆಂದು ಹಿಂದೆಯೇ ಉಪೋದ್ಘಾತದಲ್ಲಿ ಸೂಚಿಸಲ್ಪಟ್ಟದೆಯಷ್ಟೆ. ಈ ಅವತಾರದ ಪ್ರಮಾಣ ವಚನಗಳು—

(೧) "ಶಂಬಲಗ್ರಾಮ ಮುಖ್ಯಸ್ಯ ಬ್ರಾಹ್ಮಣಸ್ಯ ಮಹಾತ್ಮನಃ।
ಭವನೇ ವಿಷ್ಣುಯಶಸಃ ಕಲ್ಕಿಃ ಪ್ರಾದುರ್ಭವಿಷ್ಯತಿ ॥"

(೨) "ಕೃತಂ ಭವಿಷ್ಯತಿ ತದಾ ಪ್ರಜಾಸೂತಿಶ್ಚ ಸಾತ್ವಿಕೀ ॥

(೩) "ಯದಾ ಚನ್ದ್ರಶ್ಚ ಸೂರ್ಯಶ್ಚ ತಥಾ ತಿಷ್ಯೇ ಬೃಹಸ್ಪತಿಃ।
ಏಕರಾಶೌ ಸಮೇಷ್ಯನ್ತಿ ತದಾ ಭವತಿ ತತ್ಕೃತಮ್" ॥

(ವಿಷ್ಣುಪುರಾಣ-IV. 24, ಭಾಗವತ XII. 2)

(ಈ ವಚನಗಳ ತಾತ್ಪರ್ಯವು ಹಿಂದೆಯೇ ವಿವರಿಸಲ್ಪಟ್ಟದೆ.)

ಈ ಅವತಾರದ ಮಾಹಾತ್ಮ್ಯವು ಪೂರ್ವಾವತಾರಗಳ ಮಾಹಾತ್ಮ್ಯವನ್ನೆಲ್ಲಾ ಮೀರಿಸಿರುತ್ತದೆ. ರಾಮಾವತಾರದಲ್ಲಿ ಭಗವಂತನು ಧರ್ಮೋಪದೇಶವನ್ನು ತಾನಾಗಿಯೇ ಮಾಡಿ ತನ್ನ ಆಚಾರ್ಯತ್ವವನ್ನು ಅಷ್ಟುಚೆನ್ನಾಗಿ ಪ್ರಕಾಶಪಡಿಸಲಿಲ್ಲ. ಕೃಷ್ಣಾವತಾರದಲ್ಲಿ ತಾನೇ ಆಚಾರ್ಯನಾಗಿ ನಿಂತು ೭೦೦ ಶ್ಲೋಕಗಳುಳ್ಳ ಗೀತಾಶಾಸ್ತ್ರವನ್ನು ಅರ್ಜುನನಿಗೆ ಉಪದೇಶವೆಂಬ ವ್ಯಾಜದಿಂದ ಲೋಕೋಜ್ಜೀವನಕ್ಕಾಗಿ ಪ್ರಕಾಶಪಡಿಸಿ ಗೀತಾಚಾರ್ಯನೆಂದು ಪ್ರಸಿದ್ಧನಾದನು. ಬುದ್ಧಾವತಾರದಲ್ಲಿ ಧರ್ಮೋಪದೇಶವೇ ಮುಖ್ಯ

ವೆಂದು ನಿಶ್ಚಯಿಸಿ ರಾಜ್ಯಪರಿಪಾಲನಕೃತ್ಯವನ್ನೂ ಬಿಟ್ಟು ಅನೇಕ ಧರ್ಮತತ್ವಗಳನ್ನು ತಾನೇ ಪ್ರಕಾಶಪಡಿಸಿದನು. ಅನನ್ತರ ಈಗ ಈ ಶ್ರೀಕಲ್ಕಿ ನಾರಸಿಂಹಾವತಾರದಲ್ಲಿ ತನ್ನ ಪ್ರಥಮಾಚಾರ್ಯತ್ವವನ್ನೇ ಚೆನ್ನಾಗಿ ಪ್ರಕಾಶಪಡಿಸುತ್ತ ಅನೇಕಲಕ್ಷ ಶ್ಲೋಕಗಳನ್ನೂ ಅನೇಕ ಭಾಷೆಗಳಲ್ಲಿ ಉಪನ್ಯಾಸಗಳನ್ನೂ ಉಭಯ ವೇದಾಂತರಹಸ್ಯಾರ್ಥ ವಿವರಣಕ್ಕಾಗಿ ಭಗವಂತನು ತಾನೇ ರಚಿಸಿ ಕೆಲವು ಗ್ರಂಥಗಳನ್ನು ಮುದ್ರಿಸಿ ಪ್ರಕಟಪಡಿಸುತ್ತಿರುವುದರಿಂದ ಈ ಅವತಾರವು ಅನ್ಯಾದೃಶವಾದುದೆಂದು ವ್ಯಕ್ತವಾಗಿದೆ ಈ ಅವತಾರವು ಪೂರ್ವಾವತಾರಾಪೇಕ್ಷಯಾ ಜನ್ಮ-ಶೀಲ-ವೃತ್ತ-ವಿದ್ಯಾ ವೈದುಷ್ಯ-ಸದ್ಗ್ರಂಥ ನಿರ್ಮಾಣಾದಿಗಳಿಂದ ಉತ್ಕೃಷ್ಟತಮವೆಂಬುದು —“ ಜಾತ್ಯಾ ಚ ಶೀಲೇನ ಚ ವೃತ್ತವಿದ್ಯಾ-ವೈದುಷ್ಯ ಸದ್ಗ್ರಂಥ-ವಿನಿರ್ಮಿತಿಭ್ಯಃ। ಅನ್ಯಾದೃಶೋऽಯಂ ವಿಭವಾವತಾರಃ ಶ್ರೀಕಲ್ಕಿಸಿಂಹಃ ಕಿಮು ನಾಸ್ಮಿ ಸೇವ್ಯಃ ? ॥”—ಎಂಬ ಶ್ರೀಕಲ್ಕಿಸಿಂಹ ವಿರಚಿತವಾದ ಗೀತಾರ್ಥಸಾರಾಮೃತದ ಶ್ಲೋಕದಿಂದಲೇ ಸುಸ್ಪಷ್ಟವಾಗಿದೆ.

ಆಳ್ವಾರುಗಳಿಂದ ರಚಿತವಾದ ದ್ರಾವಿಡ ವೇದರೂಪವಾದ ೪೦೦೦ ದಿವ್ಯ ಪ್ರಬಂಧಗಳೂ ಆಚಾರ್ಯರಿಂದ ರಚಿತವಾದ ಅವುಗಳ ವ್ಯಾಖ್ಯಾನಗಳೂ ವೇದಾಂತ ರಹಸ್ಯಗಳೂ ಪೂರ್ವಾವತಾರ ಕಾಲಗಳಲ್ಲಿ ಈ ಲೋಕದಲ್ಲಿ ಪ್ರಚಾರದಲ್ಲಿರಲಿಲ್ಲ. ಈಗ ಈ ಶ್ರೀ ಕಲ್ಕಿ ಸಿಂಹಾವತಾರದ ಸಮಯದಲ್ಲಿ ಈ ದ್ರಾವಿಡ ವೇದಾಂತ ಪ್ರಬಂಧಗಳೆಲ್ಲಾ ಈ ಲೋಕದಲ್ಲಿ ಪ್ರಚಾರದಲ್ಲಿರುವುದರಿಂದ ಈ ಅವತಾರದಲ್ಲೇ ಉಭಯ ವೇದಾಂತಸಾಮರಸ್ಯವನ್ನೂ ಪ್ರಕಾಶಪಡಿಸಿ ಆಳ್ವಾರುಗಳು ಮತ್ತು ಆಚಾರ್ಯರುಗಳು ರಚಿಸಿ ಇರುವ ಪ್ರಬಂಧಗಳ ಸಾರಾಂಶವನ್ನೂ ಪ್ರಭಾವವನ್ನೂ ಶ್ರೀ ಭಗವಂತನು ಸಾಕ್ಷಾತ್ತಾಗಿ ತಾನೇ ಅನೇಕ ಭಾಷೆಗಳಲ್ಲಿ ವಿವರಿಸುತ್ತಿರುವು

ದರಿಂದ ಈ ಅವತಾರದ ಮಾಹಾತ್ಮ್ಯವು ಅನ್ಯಾದೃಶವಾಗಿಯೂ ಸಕಲ ಲೋಕೋಜ್ಜೀವನಕರವಾಗಿಯೂ ಇದೆ. ಇದಕ್ಕೆ ನಿದರ್ಶನವಾಗಿ-ಈ ಕೆಳಗೆ ವಿವರಿಸಿರುವ ಶ್ರೀ ಕಲ್ಕಿಸಿಂಹ ಭಗವದ್ವಿರಚಿತವಾದ ಪ್ರಬನ್ಧಗಳನ್ನು ಯಾರು ಬೇಕಾದರೂ ಓದಿನೋಡಿ ಕೃತಾರ್ಥರಾಗಬಹುದು.

(೧) **ಸಹಸ್ರಗಾಥಾ ರತ್ನಾವಳೀ**—(ಇದು ಶ್ರೀ ಶಠಾರಿಮುನಿವಿರಚಿತವಾದ ತಿರುವಾಯ್ಮೊಳಿಯೆಂಬ ಸಹಸ್ರಗಾಥಾ ಪ್ರಬಂಧದ ಸಂಸ್ಕೃತ ಪದ್ಯಾತ್ಮಕ ಪರಿವರ್ತನ)

(೨) **ತಿರುವಾಯ್ಮೊಳಿಗೆ—ಕನ್ನಡವ್ಯಾಖ್ಯಾ—(ಲಲಿತಸರಣಿ)**—ಸಹಸ್ರಗಾಥಾ ರತ್ನಾವಳ್ಯಾದಿಸಮೇತವಾದುದು.

(೩) **ಗಾನಾಮೃತ ತರಂಗಿಣೀ**—(ಶ್ರೀಭಗವದ್ಭಾಗವತ ಸಂಕೀರ್ತನ ಪರಮ್ಪರೆ-ರಾಗತಾಳಾದಿ ಸಮೇತ)

(೪) "Divine Doctrine or Universal Religion" ಎಂಬ ಶ್ರೀಭಗವನ್ಮತ ವಿಷಯಕವಾದ ಆಂಗ್ಲಭಾಷೋಪನ್ಯಾಸಾವಳೀ

(೫) **ಗೀತಾತಾತ್ಪರ್ಯ ಸಾರಾಮೃತ**—(ಕನ್ನಡ ಭಾಷೆಯಲ್ಲಿ)

(೬) **ರಾಮಾಯಣ ತಾತ್ಪರ್ಯ ಸಾರಾಮೃತ** ( ,, )

(೭) **ಶ್ರೀಭಾಷ್ಯ ಸಾರಾಮೃತ** ( ,, )

(೮) **ಶ್ರೀಭಗವನ್ಮತ** ( ,, )

ಇತ್ಯಾದ್ಯನೇಕ ಪ್ರಬಂಧಗಳು.

ಈ ಪ್ರಬಂಧಗಳು ಕ್ರಮೇಣ ಅನೇಕ ಭಾಷಾಪರಿವರ್ತನಗಳೊಡನೆ ಈ ಲೋಕದಲ್ಲಿ ಸರ್ವದೇಶಗಳಲ್ಲೂ ಪ್ರಚಾರಕ್ಕೆ ಬರಲು ಅರ್ಹತಮವಾಗಿರುವುದರಿಂದ ಎಲ್ಲರೂ ವಿಶ್ವಾಸ ಪೂರ್ವಕವಾಗಿ

ಈ ಪ್ರಬಂಧಗಳ ಪ್ರಕಟನಕ್ಕಾಗಿ ತಕ್ಕ ಪ್ರೋತ್ಸಾಹವನ್ನೂ ಸಾಹ್ಯವನ್ನೂ ಮಾಡಿ ಕೃತಾರ್ಥರಾಗಬೇಕು. (ಕೆಲವರು ಅವಿಶ್ವಾಸದಿಂದ **ಈ** ಶ್ರೀಕಲ್ಕಿ ನಾರಸಿಂಹಾವತಾರದಲ್ಲೂ ಅನಾದರವಂ ಮಾಡಿ ದೋಷಾರೋಪಗಳಂ ಮಾಡುತ್ತ—'ಅವಜಾನನ್ತಿಮಾಂ ಮೂಢಾಃ"-"ಅಜ್ಞಶ್ಚಾಶ್ರದ್ದಧಾನಶ್ಚ"—ಇತ್ಯಾದಿ ವಾಕ್ಯಾನುಸಾರವಾಗಿ ನಷ್ಟರಾಗುತ್ತಿದ್ದಾರೆ. ಹೀಗೆಮಾಡದೆ ಎಲ್ಲರೂ ವಿಶ್ವಾಸಮಾಡಿ ಕೃತಾರ್ಥರಾಗಬೇಕು.)

---

೧೨ನೆಯ ಪ್ರಕರಣ

## ಶ್ರೀಭಗವನ್ಮತದ ಸಾರಾಂಶ

ಶ್ರೀಕಲ್ಕಿ-ನಾರಸಿಂಹಸ್ವಾಮಿಯಿಂದ ಈಗ ಪ್ರಕಾಶಿತವಾಗಿರುವ ಶ್ರೀಭಗವನ್ಮತವು ಸರ್ವಮತ ಸಮ್ಮತವಾಗಿ ಸಕಲಚೇತನೋಜ್ಜೀವನ ಸಾಧನವಾಗಿರುವುದರಿಂದ ಆಯಾ ಮತಸ್ಥರೆಲ್ಲರೂ ಪರಸ್ಪರ ವಿವಾದಗಳನ್ನು ಬಿಟ್ಟು ಈ ಶ್ರೀ ಭಗವನ್ಮತವನ್ನೇ ಅವಲಂಬಿಸಿ ಉಜ್ಜೀವಿಸಬೇಕಾಗಿದೆ. ಈ ಶ್ರೀ ಭಗವನ್ಮತವು ಸಕಲ ಮತಗಳಲ್ಲಿರುವ ಧರ್ಮತತ್ವದ ಸಾರಾಂಶವಾದುದರಿಂದ ಯಾವ ಮತಸ್ಥರೂ ಇದನ್ನು ನಿರಾಕರಿಸಕೂಡದು. ಇದು ಸಕಲ ಜನ ಸೌಹಾರ್ದಕ್ಕಾಗಿಯೇ ಪ್ರವೃತ್ತವಾದ ಧರ್ಮತತ್ವವಾದುದರಿಂದ ಪರಸ್ಪರ ವಿವಾದ ಜನಕವಾದ ಅಂಶಗಳು ಈ ಶ್ರೀ ಭಗವನ್ಮತದಲ್ಲಿ ಸೇರಲಾರವು. (ಆದುದರಿಂದ ಈ ಭರತಮಂಡಲದ ದ್ವೈತಾ

ದ್ವೈತ-ವಿಶಿಷ್ಟಾದ್ವೈತಾದಿ-ಜೈನ-ಬೌದ್ಧಾದಿ ಮತಗಳೇ ಅಲ್ಲದೆ-ಮಹಾಮದ ಕ್ರೈಸ್ತಾದಿ ಸಕಲಮತಗಳೂ ಈ ಭಗವನ್ಮತವನ್ನೇ ಅವಲಂಬಿಸಿ ಉಜ್ಜೀವಿತವಾಗಬೇಕು.)

ಈ ಶ್ರೀಭಗವನ್ಮತದ ಮುಖ್ಯ ಸಾರಾಂಶವೇನೆಂದರೆ:—

(೧) **ತತ್ವಗಳು**—ಅಚೇತನ, ಚೇತನ, ಈಶ್ವರ ಎಂಬ ಮೂರು ತತ್ವಗಳು.

(೨) **ಸಂಸಾರಬನ್ಧ**--ಚೇತನವರ್ಗವು ಪೂರ್ವಕರ್ಮಾನುಗುಣವಾಗಿ ಅಚೇತನರೂಪವಾದ ಪ್ರಾಕೃತ ಶರೀರದಲ್ಲಿ ಬದ್ಧವಾಗಿ ಪಾಪಫಲವಾದ ದುಃಖವನ್ನೂ ಪುಣ್ಯಫಲವಾದ ಸುಖವನ್ನೂ ಇಹಲೋಕದಲ್ಲಿ ಅನುಭವಿಸುತ್ತಿರುವುದರಿಂದ ಈ ಬಂಧವೇ ಸಂಸಾರಬಂಧವೆಂದು ಕರೆಯಲ್ಪಡುತ್ತದೆ. ಈ ಐಹಿಕ ಸುಖದುಃಖ ಜನಕವಾದ ಪುಣ್ಯಪಾಪಗಳೆರಡೂ ಮೋಕ್ಷಕ್ಕೆ ಪ್ರತಿಬಂಧಕವಾಗಿರುವುದರಿಂದ ನಿರತಿಶಯಾನನ್ದರೂಪವಾದ ಮೋಕ್ಷವನ್ನೇ ಈಶ್ವರಾನುಗ್ರಹದಿಂದ ಎಲ್ಲರೂ ಪಡೆಯಲು ಯತ್ನಿಸಬೇಕು.

(೩) **ಮೋಕ್ಷೋಪಾಯಗಳು**—ಮೋಕ್ಷಕ್ಕೆ ಉಪಾಯಗಳು ಕರ್ಮ-ಜ್ಞಾನ-ಭಕ್ತಿ-ಪ್ರಪತ್ತಿ-ಆಚಾರ್ಯಾಭಿಮಾನ-ಇತ್ಯಾದಿ ಸಾಧನಗಳೆಂದು ಗೀತಾದಿಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿವೆ. ಇವುಗಳಲ್ಲಿ ಕರ್ಮವೆಂದರೆ ಭಗವಂತನ ಕೈಂಕರ್ಯ, ಜ್ಞಾನವೆಂದರೆ ಭಗವಂತನ ಜ್ಞಾನ, ಭಕ್ತಿಯೆಂದರೆ ಭಗವಂತನಲ್ಲೇ ಉತ್ಕಟ ಪ್ರೀತಿ, ಪ್ರಪತ್ತಿಯೆಂದರೆ ಭಗವಂತನಲ್ಲೇ ಶರಣಾಗತಿಯಂ ಮಾಡೋಣ, ಆಚಾರ್ಯಾಭಿಮಾನವೆಂದರೆ (ಸದಾಚಾರ್ಯದ್ವಾರಾ) ಪ್ರಥಮಾಚಾರ್ಯನಾದ ಭಗವಂತನನ್ನೇ ಆಶ್ರಯಿಸೋಣ—ಇತ್ಯಾದಿ ಪ್ರಕಾರಗಳಿಂದ ಈ ಸಾಧನಗಳೆಲ್ಲವೂ ಭಗವತ್ಸಂಬಂಧದಿಂದಲೇ ಫಲಕಾರಿಗಳಾಗುವುವು. ಇವುಗಳಿಗೆ ಸ್ವತಂತ್ರವಾದ

ಸಾಧನತ್ವವು ಇಲ್ಲ. ಆದುದರಿಂದ ಭಗವಂತನೇ ಸಿದ್ಧೋಪಾಯ ಭೂತನೆಂದೂ ಉಪೇಯಭೂತನೆಂದೂ ಕರೆಯಲ್ಪಡುತ್ತಾನೆ. ಶರಣಾಗತರಿಗೆ ಇವನೇ ಮೋಕ್ಷಪ್ರದನು. (ಇದೇ ಗೀತಾಶಾಸ್ತ್ರದ ಸಾರತಮವಾದ ಚರಮ ಶ್ಲೋಕಾರ್ಥವು). ಆದುದರಿಂದ ಸಕಲ ಚೇತನರೂ ಭಗವಂತನನ್ನೇ ಮೋಕ್ಷೋಪಾಯಭೂತನೆಂದು ಆಶ್ರಯಿಸಬೇಕು.

(೪) **ಮೋಕ್ಷಸ್ವರೂಪ**— ಚತುರ್ವಿಧ ಪುರುಷಾರ್ಥಗಳೆಂಬ ಧರ್ಮ-ಅರ್ಥ-ಕಾಮ-ಮೋಕ್ಷ-ಎಂಬಿವುಗಳಲ್ಲಿ ಮೋಕ್ಷವೇ ಪರಮೋತ್ಕೃಷ್ಟವಾದ ಪುರುಷಾರ್ಥವು. ಮೋಕ್ಷಕ್ಕೆ ವಿರುದ್ಧವಾದ ಧರ್ಮಾರ್ಥಕಾಮಗಳು ತ್ಯಾಜ್ಯಗಳು. ಮೋಕ್ಷಕ್ಕೆ ಅನುಕೂಲವಾದ ಧರ್ಮಾರ್ಥಕಾಮಗಳು ಗ್ರಾಹ್ಯಗಳು. ಆದುದರಿಂದ ಮೋಕ್ಷಕ್ಕೆ ಪ್ರತಿಬಂಧಕವಲ್ಲದ ಅರ್ಥಕಾಮಗಳ ಮೂಲಕ ಶರೀರಪೋಷಣವನ್ನು ಮಾಡಿಕೊಂಡು "ಶರೀರಮಾದ್ಯಂ ಖಲು ಧರ್ಮಸಾಧನಂ" ಎಂಬಂತೆ ಮೋಕ್ಷಕ್ಕೆ ಅನುಕೂಲವಾದ ಧರ್ಮಮಾರ್ಗವನ್ನೇ ಅವಲಂಬಿಸಿ ಮೋಕ್ಷವೆಂಬ ಪರಮಪುರುಷಾರ್ಥವನ್ನು ಪಡೆಯಬೇಕು. ಮೋಕ್ಷವೆಂದರೆ ಶ್ರೀಭಗವತ್ಸಾನ್ನಿಧ್ಯದಲ್ಲಿ ನಿತ್ಯವಾಸವಂ ಮಾಡುತ್ತ ಮನೋವಾಕ್ಕಾಯಗಳಿಂದ ತದೇಕಾನುಭವದಿಂದಲೂ ತತ್ಕೈಂಕರ್ಯ ಸಾಮ್ರಾಜ್ಯದಿಂದಲೂ ನಿತ್ಯ ನಿರತಿಶಯಾನಂದವನ್ನು ಅನುಭವಿಸೋಣ. ಇದು ಪರಮಪದವೆಂಬ ಶುದ್ಧ ಸತ್ವಮಯವಾದ ವೈಕುಂಠಲೋಕದಲ್ಲಿ ಪ್ರಾಪ್ಯವೆಂದು ವೇದವೇದಾಂತಾದಿ ಶಾಸ್ತ್ರಗಳಿಂದ ನಿರ್ಣೀತವಾಗಿದೆ. ಆದಾಗ್ಯೂ ಈ ಭೂಲೋಕದಲ್ಲೂ ಜೀವನ್ಮುಕ್ತಸ್ವರೂಪರಾದ ಮಹಾತ್ಮರು ಆಗಾಗ್ಗೆ ಶ್ರೀಭಗವಂತನ ನಿಯಮನದಿಂದ ಅವತರಿಸುವುದರಿಂದ ಶ್ರೀಭಗವಂತನ ಅವತಾರಗಳಂತೆಯೇ ಇಂತಹ ಮಹಾತ್ಮರ ಅವತಾರಗಳೂ ಪೂಜ್ಯಗಳೆಂದು ಶಾಸ್ತ್ರಜ್ಞರು ನಿಶ್ಚಯಿಸಿರುತ್ತಾರೆ. ಈ ಮಹಾತ್ಮರು ಪರಮಪದ

ದಲ್ಲಿ ಅನವರತ ಮಾಡಬೇಕಾದ ಗುಣಾನುಭವ-ದರ್ಶನ-ಕೈಂಕರ್ಯಾದಿಗಳನ್ನು ಇಲ್ಲಿಯೇ ಮಾಡುತ್ತಿರುವುದರಿಂದ ಜೀವನ್ಮುಕ್ತರೆಂದು ಕರೆಯಲ್ಪಡುತ್ತಾರೆ. ಇವರು ಇಲ್ಲಿದ್ದರೂ ಪರಮಪದದಲ್ಲಿದ್ದರೂ ಎಲ್ಲಿದ್ದರೂ ನಿತ್ಯಸೂರಿಗೋಷ್ಠಿಗೆ ಸೇರಿದ ಮುಕ್ತರೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆದುದರಿಂದ ಸಕಲ ಚೇತನರೂ ಈಗ ಇಲ್ಲಿಯೇ ಶ್ರೀಕಲ್ಕಿ ನಾರಸಿಂಹಾವತಾರ ರೂಪಿಯಾದ ಭಗವಂತನ ಗುಣಾನುಭವ ದರ್ಶನ ಕೈಂಕರ್ಯಾದಿಗಳನ್ನು ಮಾಡುತ್ತ ಜೀವನ್ಮುಕ್ತಸ್ವರೂಪರಾಗಿ ಕೃತಾರ್ಥರಾಗಬೇಕೆಂಬುದೇ ಸಕಲ ಶಾಸ್ತ್ರಾರ್ಥಸಾರವು.

**ಮೋಕ್ಷಕ್ಕೆ**—ಜಾತಿ-ಕುಲ-ಲಿಂಗ-ಆಶ್ರಮಾದಿ ಭೇದಗಳು ಪ್ರತಿಬಂಧಕಗಳಾಗಲಾರವು. ಸ್ಥಾವರಗಳಿಗೂ ತಿರ್ಯಗ್ಜಂತುಗಳಿಗೂ ನೀಚ ಜಾತಿಗಳಿಗೂ ಉತ್ಕೃಷ್ಟ ಜಾತಿಗಳಿಗೂ-ಸರ್ವರಿಗೂ ಈಶ್ವರನು ತನ್ನ ನಿರ್ಹೇತುಕ ಕೃಪೆಯಿಂದ ಮೋಕ್ಷಪ್ರದನಾಗುವುದರಿಂದ ಅವನ ನಿರ್ಹೇತುಕ ಕೃಪೆಗೆ ಪಾತ್ರರಾಗಿ ಎಲ್ಲರೂ ಉಜ್ಜೀವಿಸಬೇಕೆಂಬುದೇ ಪರಮಾರ್ಥವು. ಈಶ್ವರನ ಕೃಪೆಯು ನಿರ್ಹೇತುಕವಾಗಿರುವಲ್ಲಿ ಚೇತನರ ಕರ್ತವ್ಯವೇನೆಂದು ವಿಚಾರಿಸಿದರೆ ಈಶ್ವರನ ಅನುಗ್ರಹಕ್ಕೆ ಪಾತ್ರರಾಗುವಂತೆ ಯಥೇಷ್ಟ ವಿನಿಯೋಗಾರ್ಹರಾಗೋಣವೇ. ಸಕಲ ಚೇತನರೂ "ಅಹಂ-ಮಮ"-ಎಂಬೀ ೨ ದೋಷಗಳನ್ನೂ ತ್ಯಜಿಸಿ ಅಹಂಕಾರ ಮಮಕಾರರಹಿತರಾದರೆ-ಶ್ರೀಯಾಮುನಾರ್ಯರು ಸ್ತೋತ್ರರತ್ನದಲ್ಲಿ ಹೇಳಿರುವಂತೆ—

"ಮಮ ನಾಥ ಯದಸ್ತಿ ಯೋಽಸ್ಮ್ಯಹಂ
ಸಕಲಂ ತದ್ಧಿ ತವೈವ ಮಾಧವ।
ನಿಯತಸ್ವಮಿತಿ ಪ್ರಬುದ್ಧಧೀ—
ರಥವಾ ಕಿನ್ನು ಸಮರ್ಪಯಾಮಿ ತೇ ? ॥"

—ಇತ್ಯುಕ್ತ ರೀತ್ಯಾ ಶ್ರೀ ಭಗವಂತನೇ ಸಕಲಚೇತನರಿಗೂ ಅವರಿಗೆ ಸೇರಿದ ಸಕಲ ಪದಾರ್ಥಗಳಿಗೂ ಸ್ವಾಮಿಯಾದುದರಿಂದ ಅವನಿಗೆ ಯಥೇಷ್ಟ ವಿನಿಯೋಗಾರ್ಹವಾಗೋಣವೇ ಈ ಚೇತನರಿಗೂ ಈ ಪದಾರ್ಥಗಳಿಗೂ ಸ್ವರೂಪವು. ಅಚಿದ್ವತ್ಪಾರತಂತ್ರ್ಯವೇ ಚೇತನನಿಗೆ ಸ್ವರೂಪವು. "ಯೋಽನ್ಯಥಾ ಸನ್ತಮಾತ್ಮಾನ ಮನ್ಯಥಾ ಪ್ರತಿಪದ್ಯತೇ। ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ" ಎಂಬಂತೆ ಈಶ್ವರನಿಗೆ ಸೇರಿದ ಚೇತನನು ತಾನು ಸ್ವತಂತ್ರನೆಂದು ಭಾವಿಸಿದರೆ ಆತ್ಮಾಪಹಾರವೆಂಬ ಚೌರ್ಯವನ್ನು ಮಾಡಿದ ಮಹಾಪಾತಕಿಯಾಗುತ್ತಾನೆ. ಆದುದರಿಂದ ಆತ್ಮಸಮರ್ಪಣರೂಪವಾದ ಶರಣಾಗತಿಯಲ್ಲೂ ಕೂಡ ಚೇತನನಿಗೆ ಅಧಿಕಾರವು ವಸ್ತುತಃ ಇಲ್ಲವೆಂದು ಶ್ರೀಯಾಮುನಾರ್ಯರ ಸೂಕ್ತಿಗೆ ತಾತ್ಪರ್ಯ. ಆದರೂ "ರಕ್ಷಾಪೇಕ್ಷಾಂ ಪ್ರತೀಕ್ಷತೇ"—ಎಂಬಂತೆ ಚೇತನರ ಹೃದಯಶೋಧನವನ್ನು ಭಗವಂತನು ಮಾಡುತ್ತಾನೆ. ಆದುದರಿಂದಲೇ ಕೈವಲ್ಯಾದಿ ಪುರುಷಾರ್ಥಗಳು ಸುತರಾಂ ತ್ಯಾಜ್ಯಗಳೆಂದು ನಿಶ್ಚಯಿಸಿ ಪರಬ್ರಹ್ಮಾನುಭವ ಕೈಂಕರ್ಯಾದಿನಿಷ್ಠೆಯೇ ಮುಮುಕ್ಷುಪ್ರಾಪ್ಯವಾದ ಮೋಕ್ಷಸಾಮ್ರಾಜ್ಯವೆಂದು ಪ್ರಾಜ್ಞರೆಲ್ಲರೂ ನಿರ್ಣಯಿಸಿ ಇರುತ್ತಾರೆ. ಆದುದರಿಂದ ಸಕಲಚೇತನರೂ ಶ್ರೀಕಲ್ಕಿನಾರಸಿಂಹರೂಪಿಯಾದ ಪರಮಾತ್ಮನಲ್ಲೇ ವಿಶ್ವಾಸಮಾಡಿ ಕೈಂಕರ್ಯನಿಷ್ಠರಾಗಿ ಕೃತಾರ್ಥರಾಗಬೇಕು. ಇದೇ ಶ್ರೀಕಲ್ಕಿ ನಾರಸಿಂಹಸ್ವಾಮಿಯ ಮತವಾದ ಶ್ರೀಭಗವನ್ಮತದ ಸಾರಾಂಶವು. ಇದೇ ಸರ್ವಮತಸಮ್ಮತವಾದ ಸಕಲ ಲೋಕೋಜ್ಜೀವನ ಸಾಧನವಾದ ಶ್ರೀಭಗವನ್ಮತವು.

ಇದಂ ಜಯತು ಸರ್ವತ್ರ ಮನ್ಮತಂ ನಿತ್ಯಮುತ್ತಮಮ್ ।
ಸಮ್ಮತಂ ಸರ್ವಲೋಕಾನಾಂ ಸನ್ಮತಂ ಭಗವನ್ಮತಮ್ ।

**ನಿಗಮನಮ್—**

ಗೀತಾತಾತ್ಪರ್ಯ ಸಾರಾಮೃತಮಿದ ಮತುಲಂ ಸರ್ವಲೋಕೈಶ್ಚ ಸೇವ್ಯಂ
ದಿವ್ಯಂ ನವ್ಯಂ ಚ ಭವ್ಯಂ ನಿಗಮಶಿಖರತ ಸ್ತತ್ತ್ವಮಾನೀಯ ವಿಷ್ಣುಃ ।
ಶ್ರೀಮತ್ಕಲ್ಕೀಂದ್ರರೂಪೀ ವಿಭವ ತನುರಯಂ ನಾರಸಿಂಹಃ ಪರಾತ್ಮಾ
ಗೀತಾಚಾರ್ಯೋಽಂತರಾತ್ಮಾ ಜಗತಿ ವಿಜಯತೇ ಶ್ರೀಯದುಕ್ಷ್ಮಾಧರೇನ್ದ್ರಃ ॥

ಇದಂ ಶ್ರೀಕಲ್ಕಿಸಿಂಹೇನ ಶ್ರೀಶೇನ ಪರಮಾತ್ಮನಾ ।
ಉದ್ಧೃತಂ ಪಾವನಂ ಜೀಯಾದ್ಗೀತಾ ಸಾರಾಮೃತಂ ಶುಭಮ್ ॥

**ಶ್ರೀ ಕಲ್ಕಿಸಿಂಹ ಭಗವದ್ವಿರಚಿತಂ**
**ಗೀತಾತಾತ್ಪರ್ಯ ಸಾರಾಮೃತಂ ಸಂಪೂರ್ಣಂ.**





॥ ಶ್ರೀಃ ॥

# ಗೀತಾತಾತ್ಪರ್ಯ ಸಾರಾಮೃತದ ಶೋಧನ ಪತ್ರಿಕಾ

---

| ಪುಟ | ಪಂಕ್ತಿ | ಅಸಾಧು | ಸಾಧು |
|---|---|---|---|
| xiii | ೧೬ | ಸಹಸ್ರಗಾಧಾರ | ಸಹಸ್ರಗಾಧಾ |
| ೩ | ೧ | ಜಯಿಸಿ | ಜಯಸಿ |
| ೫ | ೯ | ಭೂಮ | ಭೂಯ |
| ೮ | ೬ | ಮಾಸ್ಯ | ಮಾಸ್ವ |
| ೧೧ | ೧೦ | ಭಾವಶ್ಪೇತಿ | ಭಾವಶ್ಚೇತಿ |
| ೧೩ | ೮ | ಸಂಮುಂಧ | ಸಂಬಂಧ |
| ೧೪ | ೧೫ | ಸೋಪಧಿಃ | ನೋಪಧಿಃ |
| ೧೫ | ೧೫ | ಕರ್ಮಣೇ | ಕರ್ಮಣೋ |
| ,, | ೨೪ | ಮಯಹಾ | ಯಯಹಾ |
| ೧೬ | ೫ | ಭಾರ್ತ | ಭೂರ್ತ |
| ೧೭ | ೧೫ | ಧ್ಯಾನ | ಧ್ಮಾನ |
| ,, | ೧೬ | ಪಣಮಾ | ಪಣವಾ |
| ೨೦ | ೧೪ | ನಿಷ್ಟನ | ನಿಷ್ಠನ |
| ೨೧ | ೨ | ಆತ | ಆತ್ಮ |
| ,, | ೬ | ಚೇತನ | ಚೇತನನ |
| ೨೨ | ೭ | ಮಹಾತ್ಮ | ಮಾಹಾತ್ಮ್ಯ |
| ,, | ೧೮ | ಅವುಗಳೆಲ್ಲಾ | ಅವುಗಳಿಗೆಲ್ಲಾ |
| ,, | ೨೩ | ಭೋಗ | ಯೋಗ |
| ೨೩ | ೯ | ಯಥಾತ್ಮ | ಯಾಥಾತ್ಮ್ಯ |

| ಪುಟ | ಪಂಕ್ತಿ | ಅಸಾಧು | ಸಾಧು |
|---|---|---|---|
| ೨೩ | ೧೮ | ಪ್ರಕಾಶ | ಪ್ರಕಾಶಕ |
| ೨೪ | ೨ | ಆತ್ಮಾಯವಾದ | ಆತ್ಮಾನುಭವ |
| ,, | ೨೩ | ತತ್ಸಮಸ್ಥಿ | ತತ್ಸವ್ಬಸ್ಥಿ |
| ೨೪ | ೨೧ | ಶ್ರೀಕೃಷ್ಣ | ಶ್ರೇಷ್ಠ |
| ೨೬ | ೨೩ | ಸುಕೃತ | ಸುಕೃತಿ |
| ೨೭ | ೧೩ | ಮನುಷ್ಯಾ | ಮನುಷ್ಯಾದಿ |
| ,, | ೧೮ | ಅಧಿಯಾಜ್ಞ | ಅಧಿಯಜ್ಞ |
| ೨೯ | ೧೦ | ಆದರೂ | ಅವರು |
| ೩೦ | ೧೫ | ಭವ | ಭಾವ |
| ,, | ೨೧ | ನಾನೇ | ತಾನೇ |
| ೩೧ | ೨೧ | ಕೃಷ್ಣನು | ಕೃಷ್ಣನ |
| ೩೨ | ೪ | ಪ್ರಮಾಣ | ಪ್ರಣಾಮ |
| ೩೨ | ೨೬ | ತನ್ನ | ನನ್ನ |
| ೩೪ | ೨೨ | ಜಾನಕ್ಕೆ | ಜ್ಞಾನಕ್ಕೆ |
| ,, | ೨೫ | ಷೃಂಗ | ಷ್ವಂಗ |
| ೩೫ | ೨೪ | ತಮನಸ್ಸು | ತಮಸ್ಸು |
| ೩೬ | ೫ | ಜನನ್ಮ | ಜನ್ಮ |
| ೩೮ | ೫ | ದೇವೀ | ದೈವೀ |
| ೪೩ | ೨೨ | ಚೇದನೆಯು | ಚೋದನೆಯು |
| ೪೮ | ೨೫ | ಸತ್ಯವೆಂದು | ಸತ್ಯವೆಂದು ನನಗೆ ಪ್ರಿಯನಾದ ನಿನಗೆ ಹೇಳುತ್ತೇನೆ.'' (XVIII 65) |

ಶ್ರೀಃ

# ಶ್ರೀಕಲ್ಕಿಸಿಂಹಭಗವತ್ಪ್ರಬನ್ಧಮಾಲಾ



| | | | | |
|---|---|---|---|---|
| ೧. | ವೇದಾಂತವೇದಾವಳೀ (ದೇವನಾಗರಲಿಪಿ) | 11 | 8 | 0 |
| ೨. | ಶ್ರೀವರವರಮುನಿದಿನಚರ್ಯಾ ( ,, ) (ಸವ್ಯಾಖ್ಯಾ) | 0 | 12 | 0 |
| ೩. | ಸಹಸ್ರಗಾಥಾರತ್ನಾವಳೀ ( ,, ) | 4 | 0 | 0 |
| ೪. | ತಿರುವಾಯ್ಮೊಳಿ (ಕನ್ನಡ ವ್ಯಾಖ್ಯಾನ ಸಹಿತ) (ಪ್ರಥಮ ಸಂಪುಟ ೧-೫ ಶತಕಗಳು) | 4 | 0 | 0 |
| ೫. | ಶ್ರೀಭಾಷ್ಯ ಸಾರಾಮೃತ (ಕನ್ನಡ) | 1 | 0 | 0 |
| ೬. | ಗೀತಾತಾತ್ಪರ್ಯ ಸಾರಾಮೃತ (,,) | 0 | 8 | 0 |
| ೭. | ಗಾನಾಮೃತ ತರಂಗಿಣೀ | 0 | 12 | 0 |
| ೮. | **The Divine Doctrine or Universal Religion** | 0 | 12 | 0 |

— ಇತ್ಯಾದಿ ಗ್ರಂಥಮಾಲಾ —

ವಿಳಾಸ : ಮ್ಯಾನೇಜರ್,
ಶ್ರೀ ವೇದಾಂತ ಪುಸ್ತಕಶಾಲಾ,
೧೭, ಈಸ್ಟ್‌ಪಾರ್ಕ್‌ರೋಡ್,
ಮಲ್ಲೇಶ್ವರ, ಬೆಂಗಳೂರು ಸಿಟಿ.